# ಶಿರಡಿ ಸಾಯಿ ಸಂದೇಶಗಳು

ತಟವರ್ತಿ ವೀರರಾಘವರಾವು



ಕನ್ನಡ ಅನುವಾದ :

**ಸುಮಲತ ಜಿ.ಎಸ್.**

# ಶಿರಿಡಿ ಸಾಯಿ ಸಂದೇಶಗಳು



**ಹಗಲು ರಾತ್ರಿ ಧ್ಯಾನ–ಪರಮಾತ್ಮನಲ್ಲಿ ಲೀನ**


ರಚನೆ : **ತಟವರ್ತಿ ವೀರರಾಘವರಾವು**

ಅನುವಾದ: **ಪುಷ್ಪಮೋಹನ್**



**ಶ್ರೀರಾಮ ಪಬ್ಲಿಕೇಶನ್ಸ್**

ಶ್ರೀ ರಾಮಧಾಮ ಪಿರಮಿಡ್ ಧ್ಯಾನಕೇಂದ್ರ,

ನಾರಾಯಣಪ್ಪಗಾರ್ಡನ್, ವೈಟ್‌ಫೀಲ್ಡ್, ಬೆಂಗಳೂರು – ೫೬೦ ೦೬೬

---

**ಪಿರಮಿಡ್ ವ್ಯಾಲಿ ಇಂಟರ್‌ನ್ಯಾಷನಲ್**

ಕೆಬ್ಬೆದೊಡ್ಡಿ ಗ್ರಾಮ, ಹಾರೋಹಳ್ಳಿ ಹೋಬಳಿ, ಕನಕಪುರ ರಸ್ತೆ, ಬೆಂಗಳೂರು

**Shirdi Sai Sandeshgalu** Edited by Published by **Srirama Publications,** Sri Ramadhama Pyaramid Dyanakendra, Narayanappa Garden, Whitefiled, Bangalore - 560 066.
M.: 9449695503, 80500 82689, 9886532204

| | | |
|---|---|---|
| ಪ್ರಥಮ ಮುದ್ರಣ | : | ಡಿಸಂಬರ್ 2012 |
| ದ್ವಿತಿಯ ಮುದ್ರಣ | : | ಮೇ 2015 |
| ತೃತೀಯ ಮುದ್ರಣ | : | ಫೆಬ್ರವರಿ 2023 |
| ಹಕ್ಕುಗಳು | : | ಪ್ರಕಾಶಕರು |
| ಪ್ರಕಾಶಕರು | : | **ಶ್ರೀರಾಮ ಪಬ್ಲಿಕೇಶನ್ಸ್**<br>ಶ್ರೀ ರಾಮಧಾಮ ಪಿರಮಿಡ್ ಧ್ಯಾನಕೇಂದ್ರ,<br>ನಾರಾಯಣಪ್ಪಗಾರ್ಡನ್, ವೈಟ್‌ಫೀಲ್ಡ್,<br>ಬೆಂಗಳೂರು – ೫೬೦ ೦೬೬<br>ಮೊ.: 9449695503, 9886532204 |
| ಬಳಸಿದ ಕಾಗದ | : | 70 ಜಿ.ಎಸ್.ಎಂ. ಮ್ಯಾಪಾಲಿಥೊ ಡೆಮಿ 1/8 |
| ಪ್ರತಿಗಳು | : | 1000 |
| ಪುಟಗಳು | : | iii+63=66 |
| ಮುಖಚಿತ್ರ | : | ಚಂದ್ರಕಾಂತ ಪಟ್ಟಣ |
| ಬೆಲೆ | : | 40/– ರೂ |

ಮುದ್ರಣ :
**ಪೂರ್ಣಾ ಗ್ರಾಫಿಕ್ಸ್,**
ಬೆಂಗಳೂರು 9844167475

# ವಿಷಯ ಸೂಚಕ



# ಯೋಚಿಸಿರಿ

ಪ್ರಪಂಚದಲ್ಲಿ ಎಲ್ಲರೂ ತಮಗೆ ಇಷ್ಟವಾದ ದೇವರನ್ನು ತಮಗೆ ಇಷ್ಟವಾದ ರೀತಿಯಲ್ಲಿ ಆರಾಧಿಸುತ್ತಾ, ತಮ್ಮ ಬಯಕೆಗಳನ್ನು ತೀರಿಸಿ ಎಂದು, ತಮ್ಮ ಕಷ್ಟಗಳನ್ನು ಹೋಗಲಾಡಿಸಿ ಎಂದು ಕೇಳಿಕೊಳ್ಳುತ್ತಿರುತ್ತಾರೆ. ಹಾಗೆ ಕೆಲವರು ಪೂಜೆಗಳನ್ನು ಮಾಡಿ ಕೋರಿದರೇ, ಕೆಲವರು ಪ್ರಾರ್ಥನೆಯ ಮೂಲಕ, ಇನ್ನೂ ಕೆಲವರು ನಮಾಜು ಮಾಡುವುದರ ಮೂಲಕ ಬೇಡುತ್ತಿರುತ್ತಾರೆ. ಇನ್ನೂ ಕೆಲವರು ಭಜನೆಗಳನ್ನು ಮಾಡಿ ಬಯಸುತ್ತಿರುತ್ತಾರೆ.

ಎಲ್ಲರೂ ಹಾಗೆ ಆರಾಧಿಸುತ್ತಾ ಯೋಚಿಸುತ್ತಿದ್ದಾರೆ ವಿನಹ ಅಂತಹ ದೊಡ್ಡವರಾದ ಆ ದೇವರು ಹೇಳಿದ್ದು ಮಾತ್ರ ಆಚರಿಸುವುದಿಲ್ಲ. ಆ ದೇವರನ್ನು ಪ್ರಾರ್ಥಿಸಲು ಪ್ರಾಮುಖ್ಯತೆ ನೀಡುತ್ತಾರೆ ವಿನಹ ಆತ ಹೇಳಿದ್ದು ಪಾಲಿಸಲು ಪ್ರಾಮುಖ್ಯತೆ ನೀಡುವುದಿಲ್ಲ. ಸದಾ ಆತ ಅಂತಹ ಶ್ರೇಷ್ಟ ವ್ಯಕ್ತಿ, ಇಂತಹ ದೊಡ್ಡವನು ಎನ್ನುತ್ತಾ ಆತನ ಹಿರಿಮೆಯನ್ನು ಕೀರ್ತಿಸುತ್ತಾರೆ, ಆತನ ಮಹತ್ವವನ್ನು ಹೇಳಿಕೊಳ್ಳುತ್ತಾರೆ. ಆತನಗಿಂತ ದೊಡ್ಡವರು ಯಾರೂ ಇಲ್ಲ ಎನ್ನುತ್ತಾರೆ.

ಸ್ವಲ್ಪ ಯೋಚಿಸಿ ಅಂತಹ ಉತ್ತಮರು ಹೇಳುವ ಮಾತುಗಳು, ಕೊಡುವ ಸಂದೇಶಗಳು ಎಂತಹ ಮುಖ್ಯವಾದದ್ದು ಆಗಿರುತ್ತವೆ. (ಉತ್ತಮವಾದದ್ದು ಆಗಿರುತ್ತವೆ) ಅಂತಹ ದೊಡ್ಡವರು ಹೇಳಿದ್ದು ಆಚರಿಸಬೇಕಲ್ಲವೇ? ಅವರು ಹೇಳಿದ್ದನ್ನು ಆಚರಿಸಲು ಎಷ್ಟು ಜನ ಪ್ರಾಮುಖ್ಯತೆಯನ್ನು ನೀಡುತ್ತಿದ್ದಾರೆ? ಅವರನ್ನು ಎಷ್ಟು ಜನ ಆದರ್ಶವಾಗಿ ತೆಗೆದುಕೊಳ್ಳುತ್ತಿದ್ದಾರೆ? ಸದಾ ಆ ದೇವರುಗಳು ದೊಡ್ಡವರು ಎನ್ನುತ್ತಾ ಅವರ ಮಹತ್ವಗಳನ್ನು ಕಥೆಗಳಾಗಿ ಹೇಳುವವರನ್ನು ಅನುಸರಿಸುತ್ತಿದ್ದಾರೆ ಹೊರತು ಅಂತಹ ಮಹತ್ಮೆಗಳು ಇರುವ ಆ ದೇವರುಗಳು ಹೇಳಿದ್ದು ಮಾತ್ರ ಯಾರೂ ಕೇಳುತ್ತಿಲ್ಲ, ಪಾಲಿಸುತ್ತಿಲ್ಲ ಪ್ರಾಮುಖ್ಯತೆ ನೀಡುತ್ತಿಲ್ಲ, ಬುದ್ಧಿವಂತರು ಶ್ರೇಷ್ಠೋತ್ತಮನಾದ ದೇವರನ್ನು ಅನುಸರಿಸುತ್ತಾರೆ. ಅಷ್ಟೇ ವಿನಹ ಆ ದೇವರು ದೊಡ್ಡವನು ಎಂದು ಹೇಳುವವರನ್ನು ಅನುಸರಿಸುವು (ಹಿಂಬಾಲಿಸುವು)ದಿಲ್ಲ. ಆದ್ದರಿಂದ ಆ ದೇವರು ಹೇಳಿದ್ದನ್ನು ಆಚರಿಸೋಣ ಅವರು ಬೋಧಿಸಿದ ಮಾರ್ಗದಲ್ಲಿ ಪಯಣಿಸೋಣ, ಜೀವನವನ್ನು ಧನ್ಯವಾಗಿಸಿಕೋಳ್ಳೋಣ.

ಸಾಮಾನ್ಯರು ಆಲೋಚಿಸುವ ವಿಧಾನಕ್ಕೂ ಅಂತಹ ಮಹಾನುಭಾವರು ಬೋಧಿಸುವುದಕ್ಕೂ ತುಂಬಾ ವ್ಯತ್ಯಾಸವಿರುತ್ತದೆ. ಏಕೆಂದರೆ ಸಾಮಾನ್ಯರು ಸದಾ ತಾತ್ಕಾಲಿಕಾ ಲಾಭಗಳು, ತಾತ್ಕಾಲಿಕ ಆನಂದ, ತಾತ್ಕಾಲಿಕ ಸುಖಗಳಿಗೇ ಪ್ರಾಮುಖ್ಯತೆಯನ್ನು ನೀಡುತ್ತಾರೆ. ಆದರೆ ಅಂತಹ ಮಹಾನುಭಾವರು ಶಾಶ್ವತ ಲಾಭಗಳು, ಶಾಶ್ವತ ಆನಂದಕ್ಕಾಗಿ ಪ್ರಯತ್ನಿಸಿ ಎಂದು, ಹೊಂದಿ ಎಂದು ಬೋಧಿಸುತಾರೆ. ಏಕೆಂದರೆ ತಾತ್ಕಾಲಿಕ ಎಂದರೇ ಸ್ವಲ್ಪಕಾಲ ಇರುವುದು. ತಾತ್ಕಾಲಿಕ ಎಂದಿಗೂ ತಾತ್ಕಾಲಿಕವೇ! ಶಾಶ್ವತವೇ ತುಂಬಾ ದೊಡ್ಡದು. ಆದ್ದರಿಂದ ಶ್ರೇಷ್ಟವಾದ ಶಾಶ್ವತ ಮಾರ್ಗವನ್ನೇ ಭೋಧಿಸುತ್ತಾರೆ.

ಉದಾಹರಣೆಗೆ ಸಾಮಾನ್ಯರ ಆಲೋಚನಾ ವಿಧಾನ, ಅಂತಹ ಶ್ರೇಷ್ಠ ವ್ಯಕ್ತಿಗಳು ಜೀವಿಸಿದ ವಿಧಾನ ಹೇಗೆ ಇರುತ್ತದೆಯೋ ನೋಡೋಣ. ಶಿರಡಿ ಬಾಬಾ ಅವರನ್ನೇ ತೆಗೆದುಕೊಳ್ಳೋಣ. ಅನೇಕರು ಶಿರಡಿ ಬಾಬಾ ತುಂಬಾ ಶಕ್ತಿವಂತನು, ಯಾಚಿಸಿದರೆ (ಬೇಡಿದರೆ) ಧನವಂತರಾಗಬಹುದು ಎಂದು ಆತನನ್ನು ಆರಾಧಿಸುತ್ತಾ, ಭಜನೆಗಳನ್ನು ಮಾಡುತ್ತಾ ಧನವನ್ನು ಪ್ರಸಾಧಿಸಿ ಎಂದು, ತನ್ನನ್ನು ಧನವಂತನಾಗಿ ಮಾಡಿ ಎಂದು ಪ್ರಾರ್ಥಿಸುತ್ತಾರೆ. ಅವರ ಉದ್ಧೇಶವೇನೆಂದರೇ ಬಾಬಾಗೆ ಇರುವ ಅನಂತವಾದ ಶಕ್ತಿಯಲ್ಲಿ ಸ್ವಲ್ಪ ಶಕ್ತಿ ತಮಗೆ

ಪ್ರಸಾಧಿಸಿದರೇ, ಸ್ವಲ್ಪ ಅವರು ಅನುಗ್ರಹಿಸಿದರೇ, ತಾವೂ ಧನವಂತರಾಗಬಹುದೆಂದು ಸಾಮಾನ್ಯರು, ಇನ್ನೂ...ಇನ್ನೂ... ಕೋಟೀಶ್ವರರು ಆಗಬಹುದೆಂದು ಧನವಂತರು ಆತನ್ನನ್ನು ಪ್ರಾರ್ಥಿಸುತ್ತಿದ್ದಾರೆ. ಆದರೆ ಅಷ್ಟಕ್ಕಿಂತ ಹೆಚ್ಚಾಗಿ ಯೋಚಿಸುತ್ತಿಲ್ಲ.

ಆಲೋಚಿಸಿ ಬಾಬಾ ಅವರಿಗೆ ಇರುವ ಅನಂತವಾದ ಶಕ್ತಿಯಲ್ಲಿ ಸ್ವಲ್ಪ ಶಕ್ತಿ ಕೋಟ್ಟರೇನೇ ತಾವು ಧನವಂತರಾಗಿ ಬೋಗಭಾಗ್ಯಗಳಿಂದ ತೂಗಾಡಿ ಬಹುದೆಂದು ಬಾಬಾರನ್ನು ಪ್ರಾರ್ಥಿಸುತ್ತಿದ್ದೀರಲ್ಲವೇ? ಸ್ವಲ್ಪ ಶಕ್ತಿಯಿಂದಲೇ ಭೋಗಭಾಗ್ಯಗಳನ್ನು ಕರುಣಿಸುವ ಆತ, ಅವರಿಗಿರುವ ಅನಂತವಾದ ಶಕ್ತಿಯಿಂದ ಎಷ್ಟು ಬಂಗ್ಲೆಗಳನ್ನು ನಿರ್ಮಿಸಿಕೊಳ್ಳಬಹುದು? ಎಷ್ಟೋ ಸಂಪತ್ತುಗಳನ್ನು ಕೂಡಿಹಾಕಿಕೊಳ್ಳಬಹುದು?

ರಾಜಭವನಗಳನ್ನೇ ನಿರ್ಮಿಸಿಕೊಂಡು ವಿಲಾಸವಂತವಾದ ಸೌಕರ್ಯಗಳನ್ನು ಹೊಂದಿಸಿಕೊಂಡು ಬೆಲೆಬಾಳುವ ವಸ್ತಗಳು ಧರಿಸಿ, ನಿತ್ಯವೂ ಷಡ್ರಸೋಪೇತವಾದ (ಪಂಚಭಕ್ಷ ಪರಮಾನ್ನವನ್ನು) ಆಹಾರವನ್ನು ಸೇವಿಸಿ, ಕೆಲಸದವರನ್ನು ಇಟ್ಟುಕೊಂಡು, ಪರಿಚಾರಕರಿಂದ ರಾಜಭೋಗಗಳನ್ನು ಅನುಭವಿಸಬಹುದಲ್ಲವೇ? ಅವರು ಹಾಗೆ ಮಾಡಿದರಾ? ಭೋಗಗಳನ್ನು ಅನುಭವಿಸಲು ಪ್ರಯತ್ನಿಸಿದರಾ? ಇಲ್ಲವಲ್ಲಾ!

ಬಾಬಾ ಸ್ವಪ್ನದಲ್ಲಿ ಕೂಡ ಈ ಪ್ರಾಪಂಚಿಕ ಧನವನ್ನು, ವಿಲಾಸವಂತವಾದ ವಸ್ತುಗಳನ್ನು ಆಕಾಂಕ್ಷಿಸಲಿಲ್ಲ (ಆಶಿಸಲಿಲ್ಲ). ಅವೆಲ್ಲವನ್ನೂ ಬಾಬಾ ತೃಣಪ್ರಾಯವಾಗಿ ಭಾವಿಸಿದರು. ಅವರು ಅವುಗಳಿಗೆ ಸ್ವಲ್ಪವೂ ಪ್ರಾಮುಖ್ಯತೆಯನ್ನು ನೀಡಲಿಲ್ಲ. ಕೊಟ್ಟಿದ್ದರೆ ಅವರು ಅರಮನೆಯಲ್ಲೇ ನಿವಾಸಮಾಡುತ್ತಿದ್ದರು. ಆದರೆ ಅವರು ಹಾಗೆ ಮಾಡದೇ ಮಸೀದಿಯಲ್ಲಿ ಇರುತ್ತಿದ್ದರು. ಅವರು ಪಟ್ಟು ಪೀತಾಂಬರಗಳನ್ನು ಧರಿಸಲಿಲ್ಲ, ಹರಿದ ವಸ್ತ್ರಗಳನ್ನು ಧರಿಸಿದರು. ಷಡ್ರಸೋಪೇತವಾದ ಪದಾರ್ಥಗಳನ್ನು ಉಣ್ಣಲಿಲ್ಲ, ಭಿಕ್ಷೆ ಬೇಡಿ ಸಿಕ್ಕದ್ದು ತಿಂದು ಜೀವಿಸುತ್ತಿದ್ದರು. ಅಂತಹ ಮಹಾನುಭಾವರಾಗಿದ್ದರೂ ಕೂಡ, ಅತಿ ಸಾಮಾನ್ಯವಾಗಿ ಜೀವಿಸುತ್ತಿದ್ದರು. ಅವರು ಎಂದಿಗೂ ವಿಲಾಸ ಜೀವನವನ್ನು ಕಳೆಯಲಿಲ್ಲ. ಅತೀ ಸಾಮಾನ್ಯವಾದ ಜೀವನವನ್ನೇ ನಡೆಸುತ್ತಿದ್ದರು. ಆದರೆ ಬಾಬಾ ಅವರನ್ನು ಆರಾಧಿಸುವವರು ಮಾತ್ರ ಬಾಬಾ ಅವರನ್ನು ವಿಲಾಸಪೂರಿತ ಜೀವನವನ್ನು ನೀಡಿ ಎಂದು ಧನವನ್ನು ಪ್ರಸಾದಿಸಿ ಎಂದು ಪ್ರಾರ್ಥಿಸುತ್ತಿರುತ್ತಾರೆ. ಅಂದರೆ ಅವರು ಯಾವ ವಿಚಾರಕ್ಕೆ ಪ್ರಾಮುಖ್ಯತೆಯನ್ನು ನೀಡಲಿಲ್ಲವೋ ಅದೇ ಪ್ರಸಾದಿಸಿ ಎಂದು ಅವರನ್ನು ಪ್ರಾರ್ಥಿಸುತ್ತಿದ್ದಾರೆ. ಅಂದರೆ ಇವರೆಲ್ಲಾ ಅವರನ್ನು (ಬಾಬಾ) ಏನು ಅರ್ಥ ಮಾಡಿಕೊಂಡಿದ್ದಾರೆ? ಅವರಿಂದ ಕಲಿತಿದ್ದಾದರೂ ಏನು? ಏಕೆಂದರೆ ಸದ್ಯಕ್ಕೆ (ಪ್ರಸ್ತುತದಲ್ಲಿ) ಮಾನವರು ಹಣಕ್ಕೆ, ಹೆಂಡತಿ ಮಕ್ಕಳಿಗೆ, ಸಂಸಾರಕ್ಕೆ, ಸುಖಗಳಿಗೆ ಪ್ರಾಮುಖ್ಯತೆಯನ್ನು ಕೊಡುತ್ತಿದ್ದಾರೆ. ಅಷ್ಟೇ ವಿನಹ ಶಾಶ್ವತ ಮೋಕ್ಷಕ್ಕೆ ಪ್ರಾಮುಖ್ಯತೆಯನ್ನು ನೀಡುತ್ತಿಲ್ಲ. ಅದರ ಪ್ರಾಮುಖ್ಯತೆಯನ್ನು ಗುರ್ತಿಸುತ್ತಿಲ್ಲ.

ಲೋಕದಲ್ಲಿ ಮಾನವರು ಈ ಸ್ಥಿತಿಯಲ್ಲಿರುವಾಗಲೇ ಬಾಬಾರಂತಹ ಯೋಗೀಶ್ವರರು ಉದ್ಭವಿಸಿ (ಜನ್ಮಿಸಿ) ಅವರನ್ನು ಸರಿಯಾದ ಮಾರ್ಗದಲ್ಲಿ ನಡೆಸಿ, ಅವರಿಗೆ ಸರಿಯಾದ ಪ್ರವರ್ತನೆಯನ್ನು ತಿಳಿಯಪಡಿಸುತ್ತಾರೆ. ಅವರಿಗೆ ಧರ್ಮವನ್ನು ಬೋಧಿಸುತ್ತಾರೆ. ಅಂತವರಲ್ಲಿ ಮುಕ್ತಾಬಾಯಿ, ತುಕಾರಾಮ್, ಏಕನಾಥನು, ರಾಮದಾಸರು, ಕಬೀರರು, ವಿವೇಕಾನಂದರು, ಇನ್ನೂ ಮುಂತಾದವರು ಅನೇಕರಿದ್ದಾರೆ.

(ಈ ವಿಷಯವೇ ಶ್ರೀ ಸಾಯಿ ಸಚ್ಚರಿತ್ರೆಯಲ್ಲಿ 4ನೇ ಅಧ್ಯಾಯದಲ್ಲಿ 30ನೇ ಪುಟದಲ್ಲಿ ಹೇಳಲಾಗಿದೆ). ಆದ್ದರಿಂದ ಅವರನ್ನು ಆರಾಧಿಸುವುದಲ್ಲ ಅವರು ಹೇಳಿದ್ದನ್ನು ಆಚರಿಸಬೇಕು. ಅರ್ಥಿಸುವುದಲ್ಲ (ಬೇಡುವುದಲ್ಲ), ಅವರನ್ನು ಆದರ್ಶವಾಗಿ ತೆಗೆದುಕೊಳ್ಳಬೇಕು. ಅವರನ್ನು ಪ್ರಾರ್ಥಿಸುವುದಲ್ಲ, ಅವರು ಬೋಧಿಸಿದ್ದನ್ನು ಅನುಸರಿಸಬೇಕು. ಅವರ ಹಿರಿಮೆಯನ್ನು ಅರಿತು ದೊಡ್ಡವರೆಂದು ಹೇಳುವುದಲ್ಲ, ನಾವು ಸಹ ದೊಡ್ಡವರ ಹಾಗೆ ಪ್ರವರ್ತಿಸಬೇಕು. ಅವರ ಮಹಾತ್ಮೆಗಳನ್ನು ಹೇಳಿಕೊಳ್ಳುವುದಲ್ಲ, ನಾವು ಸಹ ಮಹಾತ್ಮರಾಗಿ ಅವರ ಸಂದೇಶಗಳನ್ನು ಆಚರಿಸಬೇಕು, ಅಂತವರ ಜೀವನವೇ ಧನ್ಯ.

●



# ಸಾಯಿ ಬಾಬಾ ಯಾರು?

ಬಾಬಾರನ್ನು ತಿಳಿದುಕೊಳ್ಳದೇ ಮಾಡುವ ಆರಾಧನೆಗಳೆಲ್ಲಾ ವ್ಯರ್ಥವಾಗುತ್ತದೆ.

ಅವರನ್ನು ಅರ್ಥಮಾಡಿಕೊಳ್ಳದೆ ಮಾಡುವ ಕೆಲಸಗಳೆಲ್ಲಾ ನಿರರ್ಥಕವಾಗುತ್ತವೆ. ಮುಖ್ಯವಾಗಿ ಪ್ರತಿ ಒಬ್ಬರೂ ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರವನ್ನು ತಿಳಿದುಕೊಳ್ಳಬೇಕು. 1. ಅವರು ಯಾರು? 2. ಹೇಗೆ ಇರುತ್ತಾರೆ? 3. ಎಲ್ಲಿ ಇರುತ್ತಾರೆ? ಅನೇಕ ಜನರಿಗೆ ಈ ಪ್ರಶ್ನೆಗಳು ಆಶ್ಚರ್ಯವನ್ನು ಉಂಟುಮಾಡಿರಬಹುದು. ಬಹಳ ಜನಕ್ಕೆ ಅವರ ಕುರಿತು ಇರುವ ಅವಗಾಹನೆ ಏನೆಂದರೇ? ಅವರು ದೇವರು? ಅವರು ಹೇಗಿರುತ್ತಾರೆ? ಅಂದರೆ ದಿನನಿತ್ಯ ನಾವು ನೋಡುತ್ತಿದ್ದೇವಲ್ಲವೇ? ಅವರ ಭಾವಚಿತ್ರ ನಮ್ಮ ಮನೆಯಲ್ಲಿದೆ.

ಅವರ ವಿಗ್ರಹ ಗುಡಿಯಲ್ಲಿದೆ. ಇನ್ನೂ ಅವರು ಹೇಗಿರುತ್ತಾರೋ ತಿಳಿಯದಾ? ಎಂದು ಹೇಳಬಹುದು. ಹಾಗೆಯೇ ಅವರು ಎಲ್ಲಿರುತ್ತಾರೆ? ಎನ್ನುವ ಪ್ರಶ್ನೆಗೆ ಕೆಲವರು ದೇವಸ್ಥಾನದಲ್ಲಿರುತ್ತಾರೆ, ಶಿರಡಿಯಲ್ಲಿರುತ್ತಾರೆ, ಎಂದು ಭಾವಿಸುತ್ತಾರೆ. ಇನ್ನೂ ಕೆಲವರಿಗೆ ಅವರು ಒಂದು ಕಾಲದಲ್ಲಿ ಶಿರಡಿಯಲ್ಲಿ ಇರುತ್ತಿದ್ದರು ಎನ್ನುವ ಅವಗಾಹನೆ ಇದೆ.

ಆದರೆ ಬಾಬಾ ಕುರಿತು ಈ ರೀತಿಯ ಅವಗಾಹನೆ ಸರಿಹೋಗುವುದಿಲ್ಲ. ಆ ಪ್ರಶ್ನೆಗಳಿಗೆ ಸರಿಯಾದ ಉತ್ತರ ತಿಳಿದುಕೊಂಡಿರುವವರೇ ನಿಜವಾದ ಭಕ್ತರು. ಅದಕ್ಕೆ ಅನುಗುಣವಾಗಿ ಪ್ರವರ್ತಿಸುವವರ ಜೀವನವೇ ಧನ್ಯ. ಆದ್ದರಿಂದ ಮುಖ್ಯವಾಗಿ ಈ ಮೂರು ಪ್ರಶ್ನೆಗಳಿಗೆ ಉತ್ತರ ತಿಳಿದುಕೋಳ್ಳೋಣ.

ಮೊದಲನೇ ಪ್ರಶ್ನೆ : ಅವರು ಯಾರು? ಅಂದರೆ ಅವರು "ಆತ್ಮ" ಮುಖ್ಯವಾಗಿ ಪ್ರತಿ ಒಬ್ಬರೂ ಇದು ತಿಳಿದುಕೊಳ್ಳಬೇಕು. ಅವರು "ಆತ್ಮವೇ" ಆದರೇ ಎಲ್ಲರೂ ತಿಳಿದುಕೊಂಡಿರುವ, ಕಾಣಿಸುವ ಆ ರೂಪವಲ್ಲ. ಬಾಬಾ ಎಂದುಕೊಳ್ಳುವ ಆರೂಪ ಲೋಕ ಕಲ್ಯಾಣಕ್ಕಾಗಿ ಅವರು ತಾತ್ಕಾಲಿಕವಾಗಿ ಧರಿಸಿದ್ದಾರೆ.

ಇದೇ ವಿಷಯ "ಶ್ರೀ ಸಾಯಿ ಸಚ್ಚರಿತ್ರೆ" ಯಲ್ಲಿ ಉಪೋದ್ಘಾತದಲ್ಲಿ "ಸಾಯಿ ಬಾಬಾ ಯಾರು"? ಎನ್ನುವ ಶೀರ್ಷಿಕೆಯಲ್ಲಿ ಹೇಳಲಾಗಿದೆ. ಬಿ.ವಿ. ನರಸಿಂಹಸ್ವಾಮಿ ಅವರು ರಚಿಸಿದ "ಬಾಬಾ ಸೂತ್ರಗಳು– ಮಾತುಗಳು" ಎನ್ನುವ ಗ್ರಂಥ ಪೀಠಿಕೆಯಲ್ಲಿ ಹೀಗೆ ಬರೆದಿದ್ದಾರೆ.

"ಬಾಬಾ ದೇಹವು ಮಾಯವಾಗಿ ಹೋಗಿದೆ ಆದರೆ ಅದರಲ್ಲಿ (ಆ ದೇಹದಲ್ಲಿ) ಆಗಿದ್ದ ಬಾಬಾ ಮಾತ್ರವೇ ಇಂದಿಗೂ ಅನಂತ ಶಕ್ತಿಯ ಹಾಗೆ ನಿಂತು (ಇದ್ದು), ಅವರು ಸಮಾಧಿ ಹೊಂದುವುದಕ್ಕಿಂತ ಮುಂಚೆ ಭಕ್ತರಿಗೆ ಸಹಕರಿಸಿದ ಹಾಗೆ ಇಂದಿಗೂ ಅವರನ್ನು ಆಶ್ರಯಿಸಿದ ಅಸಂಖ್ಯಾತ ಭಕ್ತರಿಗೆ (ಮೌನ) ನಿಶಬ್ಧವಾಗಿ ಸಹಾಯ ಮಾಡುತ್ತಿದ್ದಾರೆ.

ಇದರಿಂದ ಕಾಣಿಸುವ ರೂಪ ಬಾಬಾ ಅಲ್ಲ, ಅದರಲ್ಲಿರುವ 'ಶಕ್ತಿ' ಅಂದರೇ 'ಆತ್ಮವೇ' ಬಾಬಾ ಎಂದು ತಿಳಿದುಕೊಳ್ಳಬೇಕು. ಇದೇ ವಿಷಯ ಶ್ರೀ. ಬಿ. ವಿ. ನರಸಿಂಹಸ್ವಾಮಿ ಅವರು ರಚಿಸಿದ "ಭಕ್ತರ ಅನುಭವಗಳು" ಎನ್ನುವ ಪುಸ್ತಕದಲ್ಲಿ ಒಬ್ಬ ಹೈಕೋರ್ಟ್ ಜಡ್ಜ್ ಅವರು ಕೂಡಾ ಹೀಗೆ ಬರೆದಿದ್ದಾರೆ.

**"ನನ್ನ ದೃಷ್ಟಿಯಲ್ಲಿ ಅವರು ಎಲ್ಲ ಪರಿಮಿತಿಗಳಿಗೆ ಅತೀತರು. ಅವರು ನಮ್ಮ ನಡುವೆ ಇದ್ದಾಗ ಅವರ ಮಾನವ ಶರೀರ ನಮ್ಮ ಕಣ್ಮುಂದೆ ಸಂಚರಿಸುತ್ತಿತ್ತು. ಆದರೆ ಅಧಿಕ ಭಾಗ ನಮ್ಮ ಅರಿವಿನಲ್ಲಿ ಇದ್ದಿದ್ದು (ನಿಂತದ್ದು), ಮಾತ್ರ ಅವರ ಅನಂತ ತತ್ವವೇ (ಆತ್ಮವೇ). ಈಗ ಅಶಾಶ್ವತವಾದ ಆ ದೇಹವು ಮಾಯವಾಗಿ 'ಸಾಯಿಬಾಬಾ' ಎನ್ನುವ ಶಾಶ್ವತವಾದ ಅನಂತ ಶಕ್ತಿ (ಆತ್ಮ) ಮಾತ್ರವೇ ನಿಂತಿದೆ (ಉಳಿದಿದೆ).**

ಇದರಿಂದ ಅಶಾಶ್ವತವಾದ ದೇಹವು ಬಾಬಾ ಅಲ್ಲ. ಶಾಶ್ವತವಾದ ಅನಂತ ಶಕ್ತಿವಂತವಾದ 'ಆತ್ಮವೇ' ಬಾಬಾ ಎಂದು ಪ್ರತಿ ಒಬ್ಬರೂ ತಿಳಿದುಕೊಳ್ಳಬೇಕು. ಏಕೆಂದರೆ ಶರೀರ ಬಾಬಾ ಆದರೆ ಅವರು ಈಗ ಇಲ್ಲದ ಹಾಗೆ ಆದರೆ 'ಆತ್ಮಪದಾರ್ಥ'ವೇ ಬಾಬಾ ಆದ್ದರಿಂದ ಅವರು ಇನ್ನೂ ಇದ್ದ ಹಾಗೆ. ಈಗಲೇ ಅಲ್ಲ ಎಷ್ಟು ಯುಗಗಳು ಬಂದು ಹೋದರೂ ಅವರು ಇರುತ್ತಾರೆ.

ಅಷ್ಟೇ ಅಲ್ಲ ತಾವು ಆತ್ಮಪದಾರ್ಥವೆಂದು ತಾವೇ ಸ್ವಯಂ ಆಗಿ ಹೇಳಿದ್ದಾರೆ. 44 ನೇಯ ಅಧ್ಯಾಯದಲ್ಲಿ 323 ನೇಯ ಪುಟದಲ್ಲಿ ನಾನು ಎಂದರೆ ಯಾರು? ಎನ್ನುವ ಪೀಠಿಕೆಯಲ್ಲಿ ಬಾಬಾ **"ನನ್ನ ಹುಡುಕಲು ನೀವು ಎಲ್ಲೂ ಹೋಗಬೇಕಾಗಿಲ್ಲ. ನಿನ್ನ ನಾಮವು, ನಿನ್ನ ಆಕಾರವು (ಈ ದೇಹ ನಾನು, ಇದಕ್ಕೆ ಇರುವ ಹೆಸರು ಕೂಡಾ ನಾನೇ ಎನ್ನುವ ಭಾವನೆ) ಬಿಟ್ಟರೆ ನಿನ್ನಲ್ಲೇ ಅಲ್ಲದೇ ಎಲ್ಲಾ ಜೀವಿಗಳಲ್ಲೂ, ಚೈತನ್ಯ, ಅಥವ ಅಂತರಾತ್ಮ ಎನ್ನುವುದು ಒಂದು ಇರುತ್ತದೆ. "ಅದೇ ನಾನು", ಇದನ್ನು ನೀವು ಗ್ರಹಿಸಿ ನಿನ್ನಲ್ಲೇ ಅಲ್ಲದೇ ಎಲ್ಲರಲ್ಲೂ ನನ್ನನ್ನು ನೋಡು. ಇದನ್ನು ನೀನು ಅಭ್ಯಾಸ ಮಾಡಿದರೆ ಸರ್ವವ್ಯಾಪಕತ್ವವನ್ನು ಅನುಭವಿಸಿ (ಅಂದರೆ ಎಲ್ಲಾ ಕಡೆ ನಾನೇ ಎಲ್ಲಾ ನಾನೇ ಎನ್ನುವ ವಿಷಯ ಗ್ರಹಿಸಿ) ನನ್ನಲ್ಲಿ ಐಕ್ಯವಾಗುವೆ"**. ಇದರಿಂದ ಬಾಬಾ ಅಂದರೆ ಆತ್ಮ ಪದಾರ್ಥ ಎಂದು ಸ್ಪಷ್ಟವಾಗಿ ತಿಳಿದುಕೊಳ್ಳಬಹುದು.

ಮತ್ತೆ 'ಆತ್ಮ' ಬಾಬಾ ಆದರೆ

**ಎರಡನೇಯ ಪ್ರಶ್ನೆ :** ಅವರು ಹೇಗೆ ಇರುತ್ತಾರೆ? ಅಂದರೆ ಆತ್ಮ ಹೇಗೆ ನಿತ್ಯವಾದದ್ದು, ಶಾಶ್ವತವಾದದ್ದು, ಸತ್ಯವಾದದ್ದು. ಆತ್ಮಕ್ಕೆ ಹುಟ್ಟು, ಸಾವು, ಇಲ್ಲ. ಅಂದರೆ ಆತ್ಮ ಹುಟ್ಟಲಿಲ್ಲ, ಆದ್ದರಿಂದ ಸಾವಿಲ್ಲ, ಎಂದಿಗೂ ಎಂದೆಂದಿಗೂ ಇರುವಂತದ್ದು. ಆತ್ಮ ಅನಂತ ಶಕ್ತಿವಂತ ವಾದದ್ದು. ಆತ್ಮ ಎಲ್ಲಾ ಕಡೆಗೂ ವ್ಯಾಪಿಸಿಕೊಂಡಿದೆ. ಎಲ್ಲದರಲ್ಲೂ ಇದೇ. ಆತ್ಮ ಎಲ್ಲದಕ್ಕೂ ಆಧಾರವಾಗಿದೆ. ಆತ್ಮ ಮಾನವ ಇಂದ್ರಿಯಗಳಿಗೆ ಗೋಚರವಾಗುವುದಿಲ್ಲ. ಮಾನವನ ಇಂದ್ರಿಯಗಳಿಗೆ ಆತ್ಮವನ್ನು ತಿಳಿದುಕೊಳ್ಳುವ ಶಕ್ತಿ ಇಲ್ಲ. ಹೀಗೆ ಹೇಳುತ್ತಾ ಹೋದರೆ ಆತ್ಮವನ್ನು ಕುರಿತು ಎಷ್ಟಾದರೂ ಹೇಳಿಕೊಳ್ಳಬಹುದು. ಆತ್ಮವನ್ನು ಕುರಿತು ಎಷ್ಟು ಹೇಳಿಕೊಂಡರೂ ಕಡಿಮೆಯೇ! ಕಾರಣ ಆತ್ಮವೇ ಭಗವಂತ ಆದ್ದರಿಂದ! ಆತ್ಮವೇ ದೈವ ಆದ್ದರಿಂದ! ಆತ್ಮವೇ ಬಾಬಾ! ಆತ್ಮವೇ ಶಿವನು! ಆತ್ಮವೇ ಕೃಷ್ಣನು! ಆತ್ಮವೇ ಜೀಸಸ್! ಆತ್ಮವೇ ಬುದ್ಧನು! ಆತ್ಮವೇ ಎಲ್ಲಾ, ಅದಕ್ಕೆ ಬಾಬಾ ಕೃಷ್ಣನ ಹಾಗೆ ಕಾಣಿಸಿಕೊಳ್ಳುತ್ತಾರೆ.

ಶಿವನ ಹಾಗೆ ಕಾಣಿಸುತ್ತಾರೆ. ದತ್ತಾತ್ರೇಯರ ಹಾಗೆ ಕಾಣಿಸುತ್ತಾರೆ. ಎಂದು ಅನೇಕರು ಹೇಳುತ್ತಾರೆ.

ಕಾರಣ ಎಲ್ಲಾ ಭಗವಂತನೆ. ಎಲ್ಲದರಲ್ಲೂ ಇರುವುದು ಭಗವಂತನೆ. ಅದಕ್ಕಾಗಿ ಬಾಬಾ ಹೇಗೆ ಇರುತ್ತಾರೆ? ಅಂದರೆ ಆತ್ಮ ರೂಪದಲ್ಲಿ ಅಂದರೆ ಅವರು ಈ ಚರ್ಮಚಕ್ಷುಗೆ ಕಾಣದ ಶಕ್ತಿ ರೂಪದಲ್ಲಿ ಇರುತ್ತಾರೆ. ಅಂದರೆ ಅವರು ಈ ಕಣ್ಣುಗಳಿಗೆ ಕಾಣುವ ರೂಪವಲ್ಲ. ಕಾಣದ ಶಕ್ತಿ ರೂಪದಲ್ಲಿ ಇರುತ್ತಾರೆ. ಅಂದರೆ ಅವರು ಕಣ್ಣಿಗೆ ಕಾಣುವ ರೂಪವಲ್ಲ, ಕಣ್ಣಿಗೆ ಕಾಣದ ಶಕ್ತಿ.

ಮೂರನೆಯ ಪ್ರಶ್ನೆ : ಅವರು ಎಲ್ಲಿ ಇರುತ್ತಾರೆ? ಅವರು ಎಲ್ಲಾಕಡೆ, ಎಲ್ಲದರಲ್ಲೂ ವ್ಯಾಪಿಸಿಕೊಂಡಿರುತ್ತಾರೆ. ಎಲ್ಲದರಲ್ಲಿ ಅಂದರೆ ಸಮಸ್ತ ಭೂತಗಳಲ್ಲಿ ಅಂದರೆ ಸಮಸ್ತ ಪ್ರಾಣಿಗಳಲ್ಲಿ ಅಂದರೆ ಮಾನವರಲ್ಲಿ, ಪ್ರಾಣಿಗಳಲ್ಲಿ, ಪಕ್ಷಿಗಳಲ್ಲಿ, ಜಲಚರಗಳಲ್ಲಿ, ಕೊನೆಗೆ ಇರುವೆಗಳಲ್ಲಿ, ಸೊಳ್ಳೆಗಳಲ್ಲಿ, (ಕ್ರಿಮಿ–ಕೀಟಗಳಲ್ಲಿ) ಕೂಡಾ ಬಾಬಾ ಇದ್ದಾರೆ ಎನ್ನುವ ವಿಷಯವನ್ನು ಪ್ರತಿ ಒಬ್ಬರೂ ತಿಳಿದುಕೊಳ್ಳಬೇಕು.

ಮುಖ್ಯವಾಗಿ ಬಾಬಾ ಭಕ್ತರೆಂದುಕೊಳ್ಳುವವರು ತಿಳಿದುಕೊಳ್ಳಬೇಕು. ಆದ್ದರಿಂದ ಯಾವ ಜೀವಿಯನ್ನು ಪ್ರೀತಿಸಿದರೂ ಬಾಬಾರವರನ್ನು ಪ್ರೀತಿಸಿದ ಹಾಗೆ. ಯಾವ ಪ್ರಾಣಿ ಜೊತೆ ಸ್ನೇಹ ಬೆಳೆಸಿದರೂ ಬಾಬಾರೊಂದಿಗೆ ಸ್ನೇಹ ಬೆಳೆಸಿದಂತೆ. ಯಾವ ಜೀವಿಯನ್ನು ಹಿಂಸೆ ಮಾಡಿದರೂ ಬಾಬಾರವರನ್ನು ಹಿಂಸಿಸಿದ ಹಾಗೆ. ಆದ್ದರಿಂದ ಬಾಬಾರವರನ್ನು ಇಷ್ಟ ಪಡುವವರು ಯಾರನ್ನೂ ಹಿಂಸಿಸಬಾರದು. ಅಂದರೆ ಪ್ರಾಣಿ ಹಿಂಸೆ ಮಾಡಬಾರದು. ಪ್ರಾಣಿಗಳನ್ನು ಕೊಂದು ಅದರ ಮಾಂಸವನ್ನು ಉಣ್ಣಬಾರದು. ಹಾಗೆ ಮಾಡಿದರೆ ಬಾಬಾರವರನ್ನು ಹಿಂಸಿಸಿದ ಹಾಗೆ. ನೋಯಿಸಿದ ಹಾಗೆ ಆಗುತ್ತದೆ. ಈ ವಿಷಯವನ್ನು ಸಾಯಿ ಸಚ್ಚರಿತ್ರೆಯ ಮೂಲಕ ನಾವು ಅನೇಕ ಸಂದರ್ಭಗಳಲ್ಲಿ ತಿಳಿದುಕೊಳ್ಳಬಹುದು.

(1) ಶ್ರೀ ಸಾಯಿ ಸಚ್ಚರಿತ್ರೆಯಲ್ಲಿ 23ನೇ ಅಧ್ಯಾಯದಲ್ಲಿ 172ನೇ ಪುಟದಲ್ಲಿ ಈ ರೀತಿ ಹೇಳಲಾಗಿದೆ. **"ಯಾರನ್ನೂ ನಿಂದಿಸುವುದಾಗಲಿ, ಅವಮಾನಿಸುವುದಾಗಲಿ, ಅವರು ಮಾಡುತ್ತಿರಲಿಲ್ಲ. (ಅವರಿಗೆ ಗೊತ್ತಿಲ್ಲ) ಸಮಸ್ತ (ಎಲ್ಲಾ) ಜೀವಿಗಳಲ್ಲೂ ಬಾಬಾ ನಾರಾಯಣನನ್ನು ಕಾಣುತ್ತಿದ್ದರು"**. ಇದರಿಂದ ಎಲ್ಲಾ ಪ್ರಾಣಿಗಳೂ, ಜೀವಿಗಳೂ, ಭಗವಂತನ ಸ್ವರೂಪಗಳೆಂದು ನಾವು ತಿಳಿದುಕೊಳ್ಳಬಹುದು.

(2) ಹಾಗೆಯೇ 22ನೇ ಅಧ್ಯಾಯದಲ್ಲಿ 170ನೇ ಪುಟದಲ್ಲಿ, ಚೇಳು, ಹಾವನ್ನು ಕುರಿತು ಬಾಬಾ ಅಭಿಪ್ರಾಯಗಳು ಎನ್ನುವ ಶೀರ್ಷಿಕೆಯಲ್ಲಿ ಸ್ವಯಂ ಬಾಬಾ ನೀಡಿದ ಸಂದೇಶವನ್ನು ನೋಡೋಣ. **"ಭಗವಂತನು ಸಕಲ ಜೀವಿಗಳಲ್ಲೂ ನಿವಾಸವಾಗಿದ್ದಾನೆ. ಅವು ಸರ್ಪಗಳೇ ಆಗಲಿ, ಚೇಳುಗಳೇ ಆಗಿರಲಿ, ಆದ್ದರಿಂದ ನಾವು ಕರುಣೆಯಿಂದ ಎಲ್ಲಾ ಜೀವಿಗಳನ್ನೂ ಪ್ರೀತಿಸಬೇಕು. ಅನವಶ್ಯಕವಾದ ಕಲಹಗಳಲ್ಲಿ, ಕೊಲ್ಲುವುದರಲ್ಲಿ, ಭಾಗವಹಿಸದೇ ಸಹನೆಯಿಂದ ಇರಬೇಕು. ಎಲ್ಲರನ್ನೂ ರಕ್ಷಿಸುವವನು ಆ ದೇವರೇ"**.

ಇದರಿಂದ ಯಾವ ಪ್ರಾಣಿಯನ್ನು ಸಾಯಿಸಬಾರದೆಂದು ಕೊನೆಗೆ ಚೇಳು, ಹಾವನ್ನು, ಸಹಿತ ಸಾಯಿಸಬಾರದೆಂದು ತಿಳಿದು ಬರುತ್ತದೆ. ಕಾರಣ ಎಲ್ಲಾ ಪ್ರಾಣಿಗಳ ರಕ್ಷಕನು ದೇವರೇ ಎಂದು ಬಾಬಾ ಹೇಳಿದ (ಮಾತಿನಿಂದ) ವಿಷಯಗಳಿಂದ ನಮಗೆ ಅರ್ಥವಾಗುತ್ತದೆ.
(3) ಮತ್ತೊಂದು ಉದಾಹರಣೆ ನೋಡೋಣ. 9ನೇ ಅಧ್ಯಾಯ 81ನೇ ಪುಟದಲ್ಲಿ



ಬಾಬಾ ಅವರಿಗೆ ತೃಪ್ತಿಯಾಗಿ ಹೇಗೆ ಊಟ ಬಡಿಸುವುದು? ಎನ್ನುವ ಶೀರ್ಷಿಕೆಯಲ್ಲಿ ಆತ್ಮ ರಾಮ್ ತರ್ಷಡ್ ಹೆಂಡತಿ ಶಿರಡಿಯಲ್ಲಿರುವ ಒಂದು ಮನೆಯಲ್ಲಿ ಎಲ್ಲರಿಗೂ ಊಟ ಬಡಿಸಿದಾಗ ಹಸಿವೆಯಿಂದ ಇದ್ದ ನಾಯಿ ಬಂದು ಬೊಗಳಲಾರಂಭಿಸಿತು.

ಆಗ ತರ್ಷದ್ ಮಡದಿ ಆ ನಾಯಿಗೆ ಒಂದು ರೊಟ್ಟಿಯನ್ನು ಹಾಕಿದಳು. ಆಗ ಆ ನಾಯಿ ತುಂಬಾ ಇಷ್ಟ ದಿಂದ ಆ ರೊಟ್ಟಿಯನ್ನು ತಿಂದಿತು.

ಆ ದಿನ ಸಾಯಂಕಾಲ ಆಕೆ ಮಸೀದಿಗೆ ಹೋದಾಗ ಬಾಬಾ ಆಕೆಗೆ ಹೀಗೆ ಹೇಳಿದ್ದಾರೆ.

**"ತಾಯಿ ನನಗೆ ಹೊಟ್ಟೆ ತುಂಬಾ ಊಟ ಹಾಕಿರುವೆ ನನ್ನ ಜೀವ ಶಕ್ತಿಗಳು ಸಂತುಷ್ಟವನ್ನು ಹೊಂದಿವೆ. ಸದಾ ಹೀಗೆ ಮಾಡು ಇದು ನಿನಗೆ ಸದ್ಗತಿಯನ್ನು ಉಂಟುಮಾಡುತ್ತದೆ. ಈ ಮಸೀದಿಯಲ್ಲಿ ಕುಳಿತು ನಾನು ಎಂದಿಗೂ ಅಸತ್ಯವನ್ನು ಹೇಳುವುದಿಲ್ಲ. ನನ್ನಲ್ಲಿ ಹೀಗೆ ದಯೆಯಿಂದ ಇರು. ಮೊದಲು ಹಸಿವೆಯಿಂದ ಇರುವ ಜೀವಿಗೆ ಊಟ ಹಾಕಿ ನಂತರ ನೀನು ಊಟ ಮಾಡು. ಇದನ್ನು ಜಾಗ್ರತೆಯಿಂದ ನೆನಪಿನಲ್ಲಿ ಇಟ್ಟುಕೋ".**

ಬಾಬಾ ಹಾಗೆ ಅಂದ ತಕ್ಷಣ ಆಕೆಗೆ ಇದೇನೂ ಅರ್ಥವಾಗಲಿಲ್ಲ. ತಕ್ಷಣ ಆಕೆ ಹೀಗೆ ಹೇಳಿದಳು. "ಬಾಬಾ! ನಾನು ನಿನಗೆ ಹೇಗೆ ಊಟ ಹಾಕಲಿ? ನನ್ನ ಊಟಕ್ಕಾಗಿಯೇ ನಾನು ಇತರರ ಮೇಲೆ ಆಧಾರ ಪಟ್ಟಿದ್ದೇನೆ. ನಾನು ಅವರಿಗೆ ಹಣವನ್ನು ಕೊಟ್ಟು ಊಟ ಮಾಡುತ್ತಿದ್ದೇನೆ". ಆಕೆ ಹಾಗೆ ಅಂದ ತಕ್ಷಣ ಬಾಬಾ ಹೀಗೆ ಉತ್ತರ ಕೊಟ್ಟರು **"ನೀನು ಪ್ರೀತಿಯಿಂದ ಕೊಟ್ಟ ಆ ರೊಟ್ಟಿಯ ಚೂರನ್ನು ತಿಂದು ಈಗಲೂ ನಾನು ತೇಲುತ್ತಿದ್ದೇನೆ. ನೀನು ಊಟ ಮಾಡುವುದಕ್ಕಿಂತ ಮುಂಚೆ ಯಾವ ನಾಯಿಗೆ ನೀನು ರೊಟ್ಟಿ ಹಾಕಿದೆಯೋ ಅದು ನಾನೇ! ಆ ರೀತಿಯಲ್ಲೇ ಮಕ್ಕಳು, ಹಂದಿಗಳು, ನೊಣಗಳು, ಆಕಳು, ಮುಂತಾದ ಪ್ರಾಣಿ–ಪಕ್ಷಿಗಳು, ಕ್ರಿಮಿ–ಕೀಟಗಳೆಲ್ಲಾ ನನ್ನ ಅಂಶಗಳೇ. ನಾನು ಅವುಗಳ ಆಕಾರದಲ್ಲಿ ತಿರುಗುತ್ತಿದ್ದೇನೆ. ಯಾರು ಸಕಲ ಜೀವಕೋಟಿಯಲ್ಲಿ ನನ್ನನ್ನು ನೋಡಲಾಗತ್ತದೆಯೋ ಅವರೇ ನನ್ನ ಪ್ರಿಯ ಭಕ್ತರು. ಆದ್ದರಿಂದ ನಾನು ಬೇರೆ ಉಳಿದ ಜೀವರಾಶಿ ಎಲ್ಲಾ ಬೇರೆ ಎನ್ನುವ ದ್ವಂದ್ವ ಭಾವನೆಯನ್ನು, ಭೇದವನ್ನು ಬಿಟ್ಟು ನನ್ನ ಸೇವಿಸು".**

ಮೇಲೆ ಹೇಳಿರುವ ಬಾಬಾ ಮಾತುಗಳಿಂದ ಸಮಸ್ತ ಪ್ರಾಣಿಕೋಟಿ ದೈವ ಸ್ವರೂಪಗಳೆಂದು ಪ್ರತಿ ಒಬ್ಬರೂ ತಿಳಿದುಕೊಳ್ಳಬೇಕು. ನಾಲಿಗೆ ರುಚಿಗಾಗಿ ಪ್ರಾಣಿ–ಪಕ್ಷಿಗಳನ್ನು ಕೊಂದು ಅದರ ಮಾಂಸ ತಿಂದು, ಅವುಗಳ ಹಿಂಸೆಗೆ ಕಾರಣವಾದವರು ಬಾಬಾರವರನ್ನು ಹಿಂಸಿಸುತ್ತಿದ್ದಾರೆಂದು ತಿಳಿದುಕೊಳ್ಳಬೇಕು. ಹಾಗೆ ಬಾಬಾ ಅವರನ್ನು ಹಿಂಸಿಸುವವರು ಎಷ್ಟು ಆರಾಧನೆಗಳನ್ನು ಮಾಡಿದರೂ, ಭಜನೆಗಳನ್ನು ಮಾಡಿದರೂ, ಅವರ ಅನುಗ್ರಹವನ್ನು ಹೇಗೆ ಪಡೆಯಬಲ್ಲರು? ಆದ್ದರಿಂದ ಬಾಬಾ ಅವರ ಅನುಗ್ರಹವನ್ನು ಹೊಂದಬೇಕೆಂದುಕೊಳ್ಳುವವರು ಜೀವ ಹಿಂಸೆ ಮಾಡಬಾರದೆಂದು ತಿಳಿದುಕೊಳ್ಳಬೇಕು.

ಇದೇ ಸಂದರ್ಭದಲ್ಲಿ ಹೇಳಿದ ನೀತಿ : "ಎಲ್ಲಾ ಜೀವಿಗಳಲ್ಲೂ ಭಗವಂತನನ್ನು ದರ್ಶಿಸು, ಉಪನಿಷತ್ತುಗಳು, ಭಗವದ್ಗೀತೆ, ಭಾಗವತ, ಮುಂತಾದವುಗಳೆಲ್ಲಾ ದೇವರನ್ನು ಪ್ರತಿಯೊಂದು. ಜೀವಿಗಳಲ್ಲಿ ನೋಡಿರೆಂದು ಬೋಧಿಸುತ್ತಿವೆ.

(4)ಹಾಗೆಯೇ ಇನ್ನೊಂದು ಸಂದರ್ಭದಲ್ಲಿ ನಡೆದ ವಿಷಯ. ಬಾಬಾಗೆ ಒಬ್ಬ ಭಕ್ತನು ಮೂರು ತಿಂಗಳ ಕುದುರೆ ಮರಿಯನ್ನು ಬಹುಮಾನವಾಗಿ ಕೊಡುತ್ತಾರೆ. ಬಾಬಾ ತುಕಾರಾಮ್‌ಗೆ ಆ ಕುದುರೆ ಮರಿಯನ್ನು ಹುಷಾರಾಗಿ ನೋಡಿಕೋ ಎಂದು ಹೇಳುತ್ತಾರೆ. ತುಕಾರಾಮ್ ಒಂದು ದಿನ ಅದು ಹುಲ್ಲು ತಿನ್ನುತ್ತಿಲ್ಲವೆಂದು ಚಾಟಿಯಿಂದ ಎರಡು ಏಟು ಹೊಡೆದನು. ನಂತರ ಬಾಬಾ ತುಕಾರಾಮ್‌ಗೆ ಬರಲು ಹೇಳಿಕಳಿಸಿ ನನ್ನ ಏತಕ್ಕಾಗಿ ಹೊಡೆದೆ? ಎಂದು ಪ್ರಶ್ನಿಸಿದರು. ಆಗ ತುಕಾರಾಮ್ ನಾನು ನಿಮ್ಮನ್ನು ಯಾವಾಗ ಹೊಡೆದೆ? ಎಂದು ಆಶ್ಚರ್ಯವಾಗಿ ಕೇಳಿದನು.

**ಆಗ ಬಾಬಾ ತನ್ನ ಅಂಗಿಯನ್ನು ಬಿಚ್ಚಿ ಅವರಿಗೆ ತಗುಲಿದ ಎರಡು ಏಟುಗಳನ್ನು ತೋರಿಸಿದರು.** ಆಗ ತುಕಾರಾಮ್ ಸಾಯಿ ಪಾದಗಳ ಮೇಲೆ ಬಿದ್ದು ಕ್ಷಮಿಸಿ ಎಂದು ಹೇಳಿ ಆಗಿಂದಾ ಆ ಕುದುರೆ ಮರಿಯನ್ನು ಪ್ರೀತಿಯಿಂದ ಬೆಳೆಸಿದನು.

ಇದರಿಂದಾ ಯಾವ ಪ್ರಾಣಿಯನ್ನು ಹಿಂಸಿಸಿದರೂ ಬಾಬಾರವರನ್ನು ಹಿಂಸಿಸಿದ ಹಾಗೆ ಎಂದು ತಿಳಿದುಕೊಳ್ಳಬೇಕು. ಪ್ರಾಣಿಗಳನ್ನು ಹಿಂಸಿಸಿ ಕೊಂದರೆ ಆ ಹಿಂಸೆ ಬಾಬಾಗೆ ತಗಲುತ್ತದೆ ಎಂದು ತಿಳಿದುಕೊಳ್ಳಬೇಕು. ಆದ್ದರಿಂದ ಮಾಂಸಕ್ಕಾಗಿ ಪ್ರಾಣಿಗಳನ್ನು ಕೊಲ್ಲಬಾರದು. ಯಾವ ಜೀವಿಯನ್ನೂ ಹಿಂಸಿಸಬಾರದು.

(5)ಹಾಗೆಯೇ 42ನೇ ಅಧ್ಯಾಯದಲ್ಲಿ 314ನೇ ಪುಟದಲ್ಲಿ ಬಾಬಾ ಹಸಿವೆ ಆಗುತ್ತಿದೆ ಎಂದ ತಕ್ಷಣ ಲಕ್ಷ್ಮೀಬಾಯಿ ರೊಟ್ಟಿ ಮಾಡಿ ತಂದು ಕೊಟ್ಟರೇ ಬಾಬಾ ಅದನ್ನು ಒಂದು ನಾಯಿಗೆ ಹಾಕಿದರು. ಅದೇನು ಎಂದು ಕೇಳಿದರೆ ಬಾಬಾ **"ಅನವಶ್ಯಕವಾಗಿ ಏಕೆ ವಿಚಾರಿಸುವೆ? ನಾಯಿಯ ಹಸಿವೆ ತೀರಿಸುವುದು ನನ್ನ ಹಸಿವೆ ತಿರಿಸುವುದು ಎಲ್ಲಾ ಒಂದೆ. ನಾಯಿಗೆ ಸಹ ಆತ್ಮ ಇದೆ. ಪ್ರಾಣಿಗಳು ಬೇರೆ ಇರಬಹುದು ಆದರೆ ಎಲ್ಲರ ಹಸಿವೆ ಒಂದೇ. ಕೆಲವರು ಮಾತನಾಡಬಲ್ಲರು ಕೆಲವರು ಮೂಕರ ಹಾಗೆ ಮಾತನಾಡಲಾರರು. ಯಾರು ಹಸಿವೆಯಿಂದ ಇದ್ದವರಿಗೆ ಅನ್ನ ಹಾಕುವರೋ ಅವರು ನನಗೆ ಅನ್ನ ಹಾಕಿದಹಾಗೆ. ಇದನ್ನೇ ದೊಡ್ಡ ನೀತಿ ಎಂದು ತಿಳಿದುಕೊಳ್ಳಿ".**

ಇದರಿಂದ ಬಾಬಾ ಎಲ್ಲಾ (ಸರ್ವ) ಜೀವಿಗಳಲ್ಲೂ ಇದ್ದಾರೆಂದು ತಿಳಿದುಕೊಳ್ಳಬಹುದು. ಬಾಬಾ ಸರ್ವವ್ಯಾಪಿ, ಸಾವು, ಹುಟ್ಟು, ಇಲ್ಲದವರು. ಅಮರರು. ಆದ್ದರಿಂದ ಯಾವ ಪ್ರಾಣಿಯನ್ನು ಹಿಂಸಿಸಬಾರದು, ಕೊಲ್ಲಬಾರದು, ಅಷ್ಟೇ ಅಲ್ಲ ಎಲ್ಲದರಲ್ಲೂ ಅವರಿದ್ದಾರೆ ಆದ್ದರಿಂದಾ ನಾವು ಏನು ಮಾಡಿದರೂ ಅವರಿಗೆ ತಿಳಿಯುತ್ತದೆ ಎಂದು ತಿಳಿದುಕೊಳ್ಳಬೇಕು. ದೇವಸ್ಥಾನಕ್ಕೆ ಹೋಗಿ ನಾವು ಕೋರಿದ್ದು, ಹೇಳಿದ್ದು, ಮಾತ್ರವೇ ಅವರಿಗೆ ತಿಳಿಯುತ್ತದೆ ಎಂದು ಮನೆಯಲ್ಲಿ ಕೋಳಿಯನ್ನು. ಮೇಕೆಯನ್ನು, ಕೊಂದು ಮಾಂಸವನ್ನು ತಿಂದರೆ ಬಾಬಾರವರಿಗೆ ತಿಳಿಯುವುದಿಲ್ಲವೆಂದು ನಾವು ಅಂದುಕೊಂಡರೆ ನಾವು ಅಜ್ಞಾನಿಗಳಾಗುತ್ತೇವೆ. ಬಾಬಾರವರನ್ನು ಕುರಿತು ತಿಳಿಯದವರೇ ಆಗುತ್ತೇವೆ.

ಬಾಬಾ ಕುರಿತು ಅವಗಾಹನೆ ಇಲ್ಲದವರೆ ಆಗುತ್ತೇವೆ. ಬಾಬಾ ಕುರಿತು ಅರ್ಥಮಾಡಿಕೊಂಡಿಲ್ಲ ಎಂದು ಅರ್ಥ.

ಈ ವಿಷಯವನ್ನು ಶ್ರೀ ಸಾಯಿ ಸಚ್ಚರಿತ್ರೆಯ 3ನೇ ಅಧ್ಯಾಯದಲ್ಲಿ 27ನೇ ಪುಟದಲ್ಲಿ ಸ್ವಯಂ ಬಾಬಾ ಅಲ್ಲಿರುವ ಭಕ್ತರಿಗೆ ಹೇಳಲಾಗಿದೆ.

**"ನೀವು ಎಲ್ಲಿ ಇದ್ದರೂ, ಏನ ಮಾಡುತ್ತಿದ್ದರೂ ನನಗೆ ತಿಳಿಯುತ್ತದೆ ಎಂದು ಚೆನ್ನಾಗಿ ನೆನಪಿನಲ್ಲಿ ಇಟ್ಟುಕೊಳ್ಳಿ. ನಾನು ಎಲ್ಲರ ಹೃದಯಗಳನ್ನು ಪಾಲಿಸುತ್ತೇನೆ. ಎಲ್ಲರ ಹೃದಯದಲ್ಲೂ ವಾಸಿಸುತ್ತೇನೆ. ಅಂದರೆ ಎಲ್ಲರಲ್ಲೂ ಇದ್ದೇನೆಂದು ಸ್ಪಷ್ಟವಾಗಿ ಹೇಳಿದ್ದಾರೆ. ನಾನು ಪ್ರಪಂಚದಲ್ಲಿರುವ ಚರಾಚರ ಜೀವಕೋಟಿಯಲ್ಲಿ ಆವರಿಸಿಕೊಂಡಿದ್ದೇನೆ. ಈ ಜಗತ್ತನ್ನು ನಡೆಸುವವನು ಸೂತ್ರದಾರಿ ನಾನೇ.! ನಾನೇ ಜಗನ್ಮಾತೆ, ತ್ರಿಗುಣಗಳ ಸಾಮರಸ್ಯ ನಾನೇ, ಇಂದ್ರಿಯ ಚಾಲಕನು ನಾನೇ ಸೃಷ್ಟಿ ಸ್ಥಿತಿಲಯ ಕಾರಕನು ನಾನೇ ಯಾರು ತಮ್ಮ ದೃಷ್ಟಿಯನ್ನು ನನ್ನ ಕಡೆ ತಿರುಗಿಸುವರು ಅವರಿಗೆ ಹಾನಿಯಾಗಲಿ, ನೋವಾಗಲಿ, ತಗಲುವುದಿಲ್ಲ. ನನ್ನ ಮರೆತವರನ್ನು ಮಾಯೆ ಶಿಕ್ಷಿಸುವುದು. ಹುಳುಗಳು, ಇರುವೆಗಳು, ಇತರ ದೃಶ್ಯಮಾನ ಚರಾಚರ ಜೀವಕೋಟಿ ಎಲ್ಲವೂ ನನ್ನ ಶರೀರವೇ ನನ್ನ ರೂಪವೇ!"**

ಮೇಲೆ ಹೇಳಿರುವ ಸಂದೇಶ ಬಾಬಾ ಸ್ವಯಂ ಅಲ್ಲಿರುವ ಭಕ್ತರಿಗೆ ಕೊಟ್ಟಿದ್ದರು ಅಂದರೆ ಅವರು ಭಕ್ತರೆಲ್ಲರಿಗೂ ನೀಡಿದ ದಿವ್ಯವಾದ ಸಂದೇಶ. ಇಲ್ಲಿ ಕೂಡಾ "ಹುಳುಗಳು, ಇರುವೆಗಳು, ಇತರ ಚರಾಚರ ಜೀವಕೋಟಿ ಎಲ್ಲಾ ನನ್ನ ಶರೀರವೇ ನನ್ನ ರೂಪವೇ" ಎಂದು ಹೇಳಲಾಗಿದೆ. ಇದರಿಂದ ಯಾವ ಪ್ರಾಣಿಯನ್ನು ಹಿಂಸಿಸಿದರೂ ಬಾಬಾರವರನ್ನು ಹಿಂಸಿಸಿದ ಹಾಗೆ! ಯಾವ ಪ್ರಾಣಿಯನ್ನು ಪ್ರೀತಿಸಿದರೂ ಬಾಬಾರವರನ್ನು ಪ್ರೀತಿಸಿದ ಹಾಗೆ! ಯಾವ ಪ್ರಾಣಿಯ ಸೇವೆ ಮಾಡಿದರೂ ಬಾಬಾರವರ ಸೇವೆ ಮಾಡಿದ ಹಾಗೆ. ಆದ್ದರಿಂದ ಯಾವ ಪ್ರಾಣಿಯನ್ನು ಕೊಲ್ಲಬಾರದು. ಹಿಂಸೆಗೆ ಕಾರಣರಾಗಬಾರದು.

ಆದ್ದರಿಂದ ಅವರು ದೊಡ್ಡವರು ಎಂದುಕೊಂಡರೆ ಸಾಲದು ಅವರು ನೀಡಿದ ಸಂದೇಶವನ್ನು ಅರ್ಥಮಾಡಿಕೊಂಡು ಅದನ್ನು ಆಚರಣೆಗೆ ತರಬೇಕು. ಹಾಗೆ ಮಾಡಿದರೆ ಅವರು ಹೇಳಿದ ಹಾಗೆ ಮಾಡದೆ ಅವರನ್ನು ಆರಾಧಿಸಿದರೂ ಪ್ರಯೋಜನವಿರುವುದಿಲ್ಲ.

ಏಕೆಂದರೆ ಅವರನ್ನು ಆರಾಧಿಸುವವರಿಗಿಂತಾ ಅವರು ಹೇಳಿದ ಹಾಗೆ ಆಚರಿಸುವವರೇ ಲಾಭವನ್ನು ಪಡೆಯುತ್ತಾರೆ. ಅವರೇ ನಿಜವಾದ ಭಕ್ತರು.

●



# ಬಾಬಾರವರ ಶಕ್ತಿಗೆ ತಕ್ಕ ಹಾಗೆ ಪ್ರವರ್ತಿಸಬೇಕು

ಬಾಬಾ ಅವರು ಶಕ್ತಿವಂತರು ಎಂದು ಹೇಳಿದರೆ ಸಾಲದು. ಅವರ ಶಕ್ತಿಗೆ ತಕ್ಕಹಾಗೆ ಪ್ರವರ್ತಿಸಿದವರೇ ಅವರನ್ನು ಅರ್ಥಮಾಡಿ ಕೊಂಡಹಾಗೆ. ಸುಮ್ಮನೆ ಬಾಯಿಯಿಂದ ಹೇಳುವವರಲ್ಲ ಆಚರಣೆ ಯಿಲ್ಲ ತೋರಿಸುವವರು ಬಾಬಾರವರನ್ನು ಸರಿಯಾಗಿ ಅರ್ಥಮಾಡಿ ಕೊಂಡಿರುವವರು. ಆದ್ದರಿಂದ ಅವರ ಶಕ್ತಿಗೆ ತಕ್ಕಹಾಗೆ ಪ್ರವರ್ತಿಸಬೇಕು.

ಅಷ್ಟೇ ವಿನಹ ಅವರ ಶಕ್ತಿಯನ್ನು ಕುಂದಿಸಿ (ಕಡಿಮೆ ಮಾಡಿ) ಪ್ರವರ್ತಿಸಬಾರದು. ಹಾಗೆ ಮಾಡುವವರು ಒಂದು ರೀತಿಯಲ್ಲಿ ಅವರನ್ನು ಹೀನಾಯವಾಗಿ ನೋಡಿದ ಹಾಗೆ. ಉದಾಹರಣೆಗೆ ಕಲೆಕ್ಟರ್ ಹತ್ತಿರ ಜವಾನನ ಜೊತೆ ಪ್ರವರ್ತಿಸಿದ ಹಾಗೆ ಪ್ರವರ್ತಿಸಿದರೆ ಹೇಗಿರುತ್ತದೆ? ಎಸ್.ಪಿ. ಹತ್ತಿರ ಕಾನ್‌ಸ್ಟೇಬಲ್ ಜೊತೆ ನಡೆದುಕೊಂಡ ಹಾಗೆ ನಡೆದುಕೊಂಡರೆ ಹೇಗಿರುತ್ತದೆ? ಅಂದರೆ ಅವರ ದರ್ಜೆ (ಅಂತಸ್ತು)ಗೆ ತಕ್ಕಹಾಗೆ ಅಲ್ಲದೆ ಅವರ ದರ್ಜೆಯನ್ನು ಕಡಿಮೆ ಮಾಡಿ ಪ್ರವರ್ತಿಸಿದರೆ ಅವರನ್ನು ಅವಮಾನಿಸಿದ ಹಾಗೆ ಅಲ್ಲವೇ? ಅಂತವರಿಗೆ ಅವರಿಂದ ಕೆಲಸಗಳಾಗುತ್ತವೆಯೇ? ಆಗುವುದಿಲ್ಲವಲ್ಲ? ಅವರ ಜೊತೆ ಕೆಲಸ ಇರುವವರಿಗೆ ಲಾಭ ಉಂಟಾಗುತ್ತದೆಯೇ? ಉಂಟಾಗುವುದಿಲ್ಲವಲ್ಲವೇ? ಹಾಗೆಯೇ ದೇವರ,

ಗುರುಗಳ ವಿಷಯದಲ್ಲೂ ಸಹ! ಅಂದರೆ ಬಾಬಾ ವಿಷಯದಲ್ಲಿ ಅವರ ಶಕ್ತಿಯನ್ನು ಅರಿತು

ಅದಕ್ಕೆ ತಕ್ಕಹಾಗೆ ವರ್ತಿಸಬೇಕು.

ಕಾರಣವೇನೆಂದರೆ (27ನೇ ಪುಟದಲ್ಲಿ) ಬಾಬಾ ಸ್ಪಷ್ಟವಾಗಿ ಹೇಳಿದ್ದಾರೆ.

**"ನೀವು ಎಲ್ಲಿ ಇದ್ದರೂ, ಏನು ಮಾಡುತ್ತಿದ್ದರೂ, ನನಗೆ ತಿಳಿಯುತ್ತದೆ ಎಂದು ನೆನಪಿನಲ್ಲಿಟ್ಟುಕೊಳ್ಳಿ".**

ಬಾಬಾ ಅವರು ಹೇಳಿದ ಪ್ರಕಾರ ಯಾರು ಎಲ್ಲಿ ಇದ್ದರೂ ಅಂದರೆ ಗುಡಿಯಲ್ಲೇ ಅಲ್ಲ ಹೊರಗೆ ಎಲ್ಲಿದ್ದರೂ ಅಂದರೆ ಮನೆಯಲ್ಲೇ ಆಗಲಿ, ಬಜಾರಿನಲ್ಲಾಗಲಿ, ಅಂಗಡಿಯಲ್ಲಾಗಲಿ, ಆಫೀಸಿ(ಕಚೇರಿ)ನಲ್ಲಾಗಲಿ, ಯಾವ ಊರಿನಲ್ಲಿದ್ದರೂ, ಅಂದರೆ ಕೊನೆಗೆ ಯಾರಿಗೂ ತಿಳಿಯದೆ ಬಾಗಿಲು ಹಾಕಿಕೊಂಡು (ಕದವನ್ನು ಮುಚ್ಚಿ) ಕೊಠಡಿಯಲ್ಲಿದ್ದರೂ ಸರಿಯೇ ಅವರು ಏನು ಮಾಡುತ್ತಿದ್ದರೂ ಇತರರನ್ನು ದೂಷಿಸಿದರೂ! ಅವಮಾನಿಸಿದರೂ! ಕಷ್ಟಕೊಟ್ಟರೂ! ಮೋಸ ಮಾಡಿದರೂ! ಸುಳ್ಳು ಹೇಳಿದರೂ! ಹೆಂಡತಿಯನ್ನು ಹಿಂಸಿಸಿದರೂ! ಕೆಲಸದವರನ್ನು ಹೀನಾಯವಾಗಿ ನೋಡಿದರೂ! ವ್ಯಾಪಾರದಲ್ಲಿ, ಉದ್ಯೋಗದಲ್ಲಿ, ಅಥವಾ ಯಾವ ವೃತ್ತಿಯಲ್ಲಾದರೂ ಸರಿಯೇ ಅನ್ಯಾಯವಾಗಿ, ಅಕ್ರಮವಾಗಿ ಪ್ರವರ್ತಿಸಿದರೂ! ಪ್ರಾಣಿಗಳನ್ನು ಹಿಂಸಿಸಿದರೂ, ಬಾಬಾ ತಿಳಿದುಕೊಳ್ಳಬಲ್ಲರೆಂದು ಪ್ರತಿ ಒಬ್ಬರೂ ನೆನಪಿನಲ್ಲಿಟ್ಟುಕೊಳ್ಳಬೇಕೆಂದು ಬಾಬಾ ಅವರು ಸ್ವಯಂ ತಾವೇ ನೀಡಿದ ಸಂದೇಶ.

ಮತ್ತೆ (ಹೀಗಿರುವಾಗ) ಅವರಿಗೆ ಎಲ್ಲಾ ತಿಳಿಯುತ್ತಿರುವಾಗ ಆ ಕೆಲಸಗಳೆಲ್ಲಾ

ಏತಕ್ಕಾಗಿ ಮಾಡುತ್ತಿದ್ದೇವೆ? ಅಂತಹ ಕೆಲಸಗಳನ್ನು ಮಾಡಿದರೆ ಬಾಬಾ ಸಂತೋಷ (ಹರ್ಷ) ಪಡುತ್ತಾರೆಯೇ? ಅಂತವರನ್ನು ಬಾಬಾ ಅನುಗ್ರಹಿಸುತ್ತಾರೆಯೇ? ಅಂತವರು ಬಾಬಾಗೆ ಇಷ್ಟವಾಗುತ್ತಾರಾ? ಆಲೋಚಿಸಿ. ಎಲ್ಲಾ ಮಾಡುತ್ತಾ ಅವರಿಗೆ ಏನು ತಿಳಿಯುವುದಿಲ್ಲವೆಂದುಕೊಳ್ಳುತ್ತಾ ಅಮಾಯಕರ ಹಾಗೆ ಗುಡಿಗೆ ಹೋಗಿ ನನಗೆ ಈ ಕಷ್ಟ ಬಂತು.... ಆ ಕಷ್ಟ ಬಂತು.... ನನಗೆ ಅದು ಕರುಣಿಸಿ.... ಇದು ಅನುಗ್ರಹಿಸಿ ಎಂದು ಪ್ರಾರ್ಥಿಸುತ್ತೇವೆ. ಅವರಿಗೆ ಅವಶ್ಯಕವಿಲ್ಲದ ಆಸಕ್ತಿ ಇಲ್ಲದ ಕಾಣಿಕೆಗಳನ್ನು ಸಮರ್ಪಿಸುತ್ತೇವೆ. ಭಕ್ತರ ಹಾಗೆ ಪ್ರವರ್ತಿಸುತ್ತೇವೆ. ಹೀಗಿರುವಾಗ ನಮ್ಮನ್ನು ಕುರಿತು ನಾವು ಮಾಡುವ ಕೆಲಸ (ಕರ್ಮ) ಗಳನ್ನು ಕುರಿತು ಅವರಿಗೆ ತಿಳಿಯುವುದಿಲ್ಲವೇ ಸ್ವಲ್ಪ ಯೋಚಿಸಿ ನೋಡಿ. ನಿಜಕ್ಕೂ ನಾವು ಏತಕ್ಕಾಗಿ ಹಾಗೆ ಪ್ರವರ್ತಿಸುತ್ತಿದ್ದೇವೆ?.

ಅಷ್ಟೇ ಅಲ್ಲ ಗುಡಿಗೆ ಹೋದಾಗ, ಗುಡಿಯಲ್ಲಿರುವಾಗ ಅಲ್ಲಿ ತುಂಬಾ ಪವಿತ್ರವಾಗಿರುತ್ತೇವೆ. ವಿನಯದಿಂದ ನಡೆದುಕೊಳ್ಳುತ್ತೇವೆ. ಗುಡಿಯಿಂದ ಹೊರಗೆ ಬಂದ ಕೂಡಲೇ ನಮ್ಮ ನಡವಳಿಕೆ ಬದಲಾಗಿಬಿಡುತ್ತದೆ. ಆ ವಿನಯ ಪವಿತ್ರತೆ ಕಾಣಿಸುವುದಿಲ್ಲ. ಇದರ ಉದ್ದೇಶವೇನು? ನಾವು ಗುಡಿಯಲ್ಲಿ ಮಾಡುವ ಕೆಲಸಗಳನ್ನು ಬಾಬಾ ತಿಳಿದುಕೊಳ್ಳಬಲ್ಲನು. ಹೊರಗೆ ನಾವು ಏನು ಮಾಡಿದರೂ ಬಾಬಾಗೆ ತಿಳಿಯುವುದಿಲ್ಲವೆಂದು ಅಲ್ಲವೇ ನಿಮ್ಮ ಉದ್ದೇಶ? ನೋಡುತ್ತಿದ್ದರೆ ನಮ್ಮ ಪ್ರವರ್ತನೆ ಗುಡಿಯಲ್ಲಿ ಒಂದು ತರಹ, ಹೊರಗೆ ಮತ್ತೊಂದು ರೀತಿಯಲ್ಲಿ ಇರುತ್ತದೆ. ಇದರ ಉದ್ದೇಶ ಬಾಬಾ ಗುಡಿಯಲ್ಲೇ ಇರುತ್ತಾರೆ. ಹೊರಗೆ ಇರುವುದಿಲ್ಲವೆಂದು ಅಲ್ಲವೇ?

ಹಾಗೆಯೆ ಕೆಲವರು ಬಾಬಾ ಶಿರಡಿಯಲ್ಲೇ ಇರುತ್ತಾರೆ. ಶಿರಡಿಗೆ ಹೋದರೆನೇ ಬಾಬಾ ಅವರನ್ನು ದರ್ಶಿಸಿಹಾಗೆ ಎಂದು ಭಾವಿಸುತಾರೆ. ಹಾಗೆ ಭಾವಿಸುವವರೆಲ್ಲಾ ಬಾಬಾರವರನ್ನು, ಬಾಬಾರವರ ಶಕ್ತಿಯನ್ನು, ಅರ್ಥಮಾಡಿಕೊಂಡಿಲ್ಲವೆಂದು ಹೇಳಬಹುದು.

ಈ ವಿಷಯವೇ ಶ್ರೀ ಸಾಯಿ ಸಚ್ಚರಿತ್ರೆಯಲ್ಲಿ 5ನೇ ಪುಟದಲ್ಲಿ ಸಾಯಿ ಬಾಬಾ ಯಾರು? ಎನ್ನುವ ಶೀರ್ಷಿಕೆಯಲ್ಲಿ ಸ್ವಯಂ ತಾವೇ ಒಬ್ಬ ಭಕ್ತನಿಗೆ ಹೇಳಿದರು. ಆರ್.ಎ.ತರ್ಖಡ್ ಅವರ ಸ್ನೇಹಿತನು ಒಂದು ಬಾರಿ ಬಾಬಾ ದರ್ಶನ ನಂತರ ಬಾಬಾ ಅವರ ಹತ್ತಿರ ರಜೆ ತೆಗೆದುಕೊಂಡು (ಬಾಬಾರವರಿಗೆ ಹೋಗಿ ಬರುತ್ತೇನೆಂದು ಹೇಳಿ) ಮುಂಬಾಯಿಗೆ ಮರಳಿ ಹೋಗುವಾಗ ಕಣ್ಣೀರಿಟ್ಟರು. ಆಗ ಬಾಬಾ ಹೀಗೆ ಹೇಳಿದರು. **"ಹುಚ್ಚನಂತೆ ಏಕೆ ವರ್ತಿಸುತ್ತಿರುವೆ? ನಾನಾ ಮುಂಬಾಯಿನಲ್ಲಿ ಸಹ ನಿನ್ನ ಜೊತೆಯಲ್ಲೇ ಇಲ್ಲವೇ"? ಎನ್ನುತ್ತಾ ಅವರು ಇನ್ನೂ "ಯಾರು ಬಾಬಾ ಶಿರಡಿನಲ್ಲಿ ಮಾತ್ರವೇ ಇದ್ದಾರೆಂದು ತಿಳಿದುಕೊಳ್ಳುತ್ತಾರೆ ಅವರು ಬಾಬಾರವರನ್ನು ನಿಜವಾಗಿ ಗ್ರಹಿಸಲಿಲ್ಲವೆಂದು ತಿಳಿದುಕೋ!"**

ಬಾಬಾ ಹೇಳಿರುವ ಪ್ರಕಾರ ಅವರು ಶಿರಡಿಯಲ್ಲೂ, ಗುಡಿಯಲ್ಲೂ, ಮಾತ್ರವೇ ಇದ್ದಾರೆಂದುಕೊಳ್ಳುವುದು ಅಜ್ಞಾನ, ಅವರು ಎಲ್ಲಾ ಕಡೆ ಇರುತ್ತಾರೆ ಎಂದು ತಿಳಿದುಕೋಳ್ಳಬೇಕು. ಅವರು ಗುಡಿಯಲ್ಲೇ ಅಲ್ಲ ಎಲ್ಲಿದ್ದರೂ ತಿಳಿದುಕೊಳ್ಳಬಲ್ಲರು. ಎನ್ನುವ ಜ್ಞಾನ ಇರುವವರು ಎಲ್ಲಾ ಕಡೆ ಪವಿತ್ರವಾಗಿ ಇರುತ್ತಾರೆ. ಹಾಗೆ ಇರುತ್ತಿಲ್ಲವೆಂದರೆ ಬಾಬಾ ಶಕ್ತಿಯನ್ನು ಕುರಿತು ಅವಗಾಹನೆ ಇಲ್ಲವೆಂದು ಅರ್ಥ! ಅವರ ಶಕ್ತಿಗೆ ತಕ್ಕಹಾಗೆ ಪ್ರವರ್ತಿಸುತ್ತಿಲ್ಲವೆಂದು ಅರ್ಥ! ಅಂದರೆ ಅವರ ಶಕ್ತಿಯನ್ನು ಕಡಿಮೆ ಮಾಡಿ ಪ್ರವರ್ತಿಸಿದ ಹಾಗೆ! ಅದಕ್ಕೆ ಅವರು **"ನೀವು ಎಲ್ಲಿ ಇದ್ದರೂ, ಏನು ಮಾಡುತ್ತಿದ್ದರೂ, ನನಗೆ ತಿಳಿಯುತ್ತದೆ ಎಂದು ಚೆನ್ನಾಗಿ ನೆನಪಿಟ್ಟುಕೋಳ್ಳಿ"** ಎಂದು ಹೇಳಿದ್ದಾರೆ. ಈ ವಿಷಯವನ್ನು ಚೆನ್ನಾಗಿ ನೆನಪಿಟ್ಟುಕೊಳ್ಳಬೇಕು. ಕಾರಣ ತುಂಬಾ ಜನ ಗುಡಿಯಿಂದ ಹೊರಗೆ ಬಂದ ತಕ್ಷಣ ಬಾಬಾಗೆ ಎಲ್ಲಾ ಗೊತ್ತಾಗುತ್ತದೆ ಎನ್ನುವ ವಿಷಯವೇ ಅಲ್ಲ, ಬಾಬಾರವರನ್ನೇ ಮರೆತುಬಿಡುತ್ತಾರೆ.

•

# ಸದ್ಗುರುವು ಹೇಳಿದ್ದನ್ನು ಮಾಡಬೇಕು ಮಾಡಿದ್ದನ್ನು ಮಾಡಬಾರದು

ಮುಖ್ಯವಾಗಿ ಪ್ರತಿಯೊಬ್ಬರೂ ಸದ್ಗುರುವು ಅಂದರೆ ಯಾರು ತಿಳಿದುಕೊಳ್ಳಬೇಕು. ಏಕೆಂದರೆ ವೇಷ ಹಾಕಿಕೊಂಡಿರುವುದರಿಂದ, ಆಶ್ರಮ ಇರುವುದರಿಂದ, ಹಲವು ವಿಷಯಗಳನ್ನು ಬೋಧಿಸುವುದರಿಂದ, ಯಾರೂ ಸದ್ಗುರು ಆಗಲಾರರು. ಅಂತವರನ್ನು ಆಶ್ರಯಿಸಿದವರು ಕಷ್ಟಗಳ ಪಾಲಾಗಬೇಕಾದ್ದೆ. ಅದಕ್ಕೆ ಶಂಕರಾಚಾರ್ಯರು ಅವರ ಭಜಗೋವಿಂದಂ ನಲ್ಲಿ ತೋತಾಚಾರ್ಯರ ಸಂದೇಶ ನೋಡೋಣ.

**"ಜಟಿಲೋ ಮುಂಡೀಲುಂಚಿತ ಕೇಶಃ**
**ಕಾಷಾಯಾಂಬರ ಬಹುಕೃತ ವೇಷಃ**
**ಪಶ್ಯನ್ನ ಪಿಚನಪಶ್ಯತಿ ಮೂಢೋ**
**ಹ್ಯುದರ ನಿಮಿತ್ತಂ ಬಹುಕೃತ ವೇಷಃ"**

**ಭಾವಾರ್ಥ:–** ಒಬ್ಬನು ಜಡೆಗಳನ್ನು ಧರಿಸಿ, ಮತ್ತೊಬ್ಬನು ಕೇಳ ಮುಂಡನವನ್ನು ಮಾಡಿಸಿಕೊಂಡು, ಇನ್ನೊಬ್ಬನು ಕೂದಲನ್ನು ಕಿತ್ತಿಹಾಕಿ, ಮತ್ತೊಬ್ಬನು ಕಾವಿ ವಸ್ತ್ರಗಳನ್ನು ಧರಿಸಿರುತ್ತಾನೆ. ಕಣ್ಣಿದ್ದು ಕೂಡ ವಾಸ್ತವವನ್ನು ನೋಡಲಾರದ ಈ ಮೂರ್ಖರು ಹೊಟ್ಟೆ ತುಂಬಿಸಿಕೊಳ್ಳುತ್ತಾರೆ ಅನೇಕಾನೇಕ ವೇಷಗಳನ್ನು ಹಾಕುತ್ತಾ ಇರುತ್ತಾರೆ.

ಆದ್ದರಿಂದ ಹೊಟ್ಟೆ ತುಂಬಿಸಿಕೊಳ್ಳಲು ವೇಷಗಳನ್ನು ಹಾಕುವವರೆಲ್ಲಾ ಭಾಧೆಯನ್ನು ಕೊಡುವ ಗುರುಗಳೆ ವಿನಹ ಬೋಧನೆ ಮಾಡುವ ಗುರುಗಳಲ್ಲ. ಯಾರಾದರೂ ಸರಿ ಆಶ್ರಯಿಸಬೇಕಾದ್ದು ಬೋಧನೆ ಮಾಡುವ ಗುರುಗಳನ್ನೇ ವಿನಹ ಭಾಧೆ ನೀಡುವ ಗುರುವನ್ನಲ್ಲ. ಬುದ್ಧಿವಂತನು ವೇಷವನ್ನು ನೋಡಿ ಗುರುವನ್ನು ಅಂದಾಜು ಮಾಡುವುದಿಲ್ಲ. ಜ್ಞಾನವನ್ನು ನೋಡಿ, ಗುರುಗಳ ಮಹಿಮೆಯನ್ನು ತಿಳಿದುಕೊಳ್ಳುತ್ತಾನೆ, ಆಶ್ರಯಿಸುತ್ತಾನೆ, ಜೀವನದಲ್ಲಿ ಲಾಭವನ್ನು ಪಡೆಯುತ್ತಾನೆ.

ಅಂತಹ ಬೋಧನೆ ಗುರುಗಳಲ್ಲಿ, ಸದ್ಗುರುಗಳಲ್ಲಿ, ಪರಮಗುರುಗಳಲ್ಲಿ, ಶಿರಡಿ ಸಾಯಿ ಬಾಬಾ ಒಬ್ಬರು.

ಅಂತಹ ಸದ್ಗುರುವನ್ನು ಆಶ್ರಯಿಸಿದವರು, ಅನುಸರಿಸುವವರು, ಆ ಗುರುವು ಹೇಳಿದ್ದನ್ನು ಮಾಡಬೇಕು. ಆದರೆ ಅವರು ಮಾಡಿದ್ದನ್ನು ಮಾಡಬಾರದು. ಕಾರಣ ಆ ಗುರುಗಳ ಮಟ್ಟಕ್ಕೆ ಇನ್ನೂ ಬೆಳೆದಿರುವುದಿಲ್ಲ ಆದ್ದರಿಂದ. ಏಕೆಂದರೆ ಅನೇಕ ಜನ ಆ ಗುರುಗಳನ್ನು ಗಮನಿಸುತ್ತಾ ಇರುತ್ತಾರೆ. ಅವರು ಏನು ಮಾಡಿದರೂ ಅವರು ಕೂಡಾ ಅದೇ ಮಾಡುತ್ತಿರುತ್ತಾರೆ. ಅದರ ಉದ್ದೇಶವೇನೆಂದರೆ ಗುರುಗಳು ಮಾಡುತ್ತಿರುವಾಗ ನಾವು ಮಾಡುವುದರಲ್ಲಿ ತಪ್ಪೇನಿದೆ ಎಂದು ಕೊಳ್ಳುತ್ತಾರೆ. ಅದಕ್ಕೆ ಬಾಬಾ ಹಾಗೆ ಮಾಡಿದ್ದಾರಲ್ಲವೇ? ಎಂದು ಕೇಳುತ್ತಾರೆ.

ಇನ್ನೂ ಕೆಲವರು ಅಂತಹ ಗುರುಗಳು ಮಾಡುವ ಕೆಲಸಗಳನ್ನು ನೋಡಿ ಅದೇನದು? ಅವರು ಅಂತಹ ಕೆಲಸಗಳನ್ನು ಮಾಡುತ್ತಿದ್ದಾರೆ? ಮಾಡಬಾರದ ಕೆಲಸಗಳನ್ನು ಮಾಡುತ್ತಿದ್ದಾರೆ? ನಿಜಕ್ಕೂ ಇವರು ಗುರುಗಳೇನಾ? ಎಂದು ಅಪನಂಬಿಕೆಗೆ ಪಾಲಾಗುವುದು ಅಪಾರ್ಥ ಮಾಡಿಕೊಳ್ಳುವುದು ಅವರಿಗೆ ದೂರವಾಗುವುದು ಮುಂತಾದ್ದೆಲ್ಲಾ ಲೋಕದಲ್ಲಿ ನೋಡುತ್ತಿರುತ್ತೇವೆ.

ಆದರೆ ಗುರುಶ್ರೇಷ್ಠರ ಪ್ರವರ್ತನೆ, ಕೆಲಸಗಳು, ಚೇಷ್ಟೆಗಳು, ಯಾರಿಗೂ ಅರ್ಥವಾಗುವುದಿಲ್ಲ. ಅವರು ಏತಕ್ಕಾಗಿ ಮಾಡುತ್ತಾರೋ! ಅವರು ಹಾಗೆ ಏತಕ್ಕಾಗಿ ಪ್ರವರ್ತಿಸುತ್ತಾರೋ! ಸಾಮಾನ್ಯರಿಗೆ ಅರ್ಥವಾಗುವುದಿಲ್ಲ. ಕಾರಣ ಅವರು ಏನು ಮಾಡಿದರೂ ಅವರಿಗೆ ಯಾವ ಕರ್ಮವೂ ಅಂಟುವುದಿಲ್ಲ. ಅವರು ಕರ್ಮಕ್ಕೆ ಅತೀತರು. ಅಂತಹ ಸ್ಥಿತಿಗೆ ತಲುಪಿದವರು. ಆದ್ದರಿಂದ ಅಂತಹ ಗುರುಗಳು ಮಾಡಿದ ಹಾಗೆ ನಾವು ಮಾಡಬಾರದು. ಅವರು ಹೇಳಿದ ಹಾಗೆ ಮಾಡಬೇಕು. ಇದು ತುಂಬಾ ಮುಖ್ಯ. ಆಗಲೇ ಶಿಷ್ಯನಿಗೆ ಲಾಭ ಉಂಟಾಗುತ್ತದೆ.

ಇದೇ ವಿಷಯವನ್ನು ಶಂಕರಾಚಾರ್ಯರು ತನ್ನ ಶಿಷ್ಯರಿಗೆ ಬೋಧಿಸಿದರು. ಅವರು ಒಂದು ಬಾರಿ ತನ್ನ ಶಿಷ್ಯರೊಂದಿಗೆ ಒಂದು ತೀರ್ಥ ಸ್ಥಳಕ್ಕೆ ಹೋದರು. ಆ ತೀರ್ಥಸ್ಥಳದಲ್ಲಿ ಶಂಕರಾಚರ್ಯರು ಏನು ಮಾಡಿದರೂ ಶಿಷ್ಯರು ಅದನ್ನೇ ಮಾಡಲಾರಂಭಿಸಿದರು. ಅವರು ಏನು ತಿಂದರೆ ಅವರೂ ಅದನ್ನೇ ತಿನ್ನುತ್ತಿದ್ದರು. ಅವರು ಹೆಂಡ ಕುಡಿದರೆ ಅವರೂ ಸಹ ಹೆಂಡ ಕುಡಿಯುತ್ತಿದ್ದರು. ಹಾಗೆ ಮಾಡುವುದು ತಪ್ಪು ಅಲ್ಲ ಎಂದು ಆ ಶಿಷ್ಯರು ಭಾವಿಸಿದರು. ಸರಿಯಾಗಿ ಅದೇ ಸಮಯದಲ್ಲಿ ಶಂಕರಾಚಾರ್ಯರು 'ಸೀಸ' ತೆಗೆದುಕೊಂಡು ಅದನ್ನು ಕುಡಿದರು. ಅವರ ಶಿಷ್ಯರಿಗೂ ಕುಡಿಯಲು ಹೇಳಿದರು. ಆದರೆ ಶಿಷ್ಯರು ಕುಡಿಯಲಿಲ್ಲ. ಭಯಪಟ್ಟರು. ಆಗ ಶಂಕರಾಚಾರ್ಯರು ಅವರನ್ನು ಏತಕ್ಕಾಗಿ ಕುಡಿಯುತ್ತಿಲ್ಲ ಎಂದು ಕೇಳಿದರು? ಆಗ ಆ ಶಿಷ್ಯರು ಸೀಸವನ್ನು ಕುಡಿದರೆ ಸಾಯುತ್ತೇವಲ್ಲವೇ? ಎಂದರು. ಆಗ ಅವರು ನಾನು ಕುಡಿದಿದ್ದೇನಲ್ಲವೇ? ಎಂದರು. ನೀವು ಬೇರೆ – ನಾವು ಬೇರೆ, ನೀವು ದೊಡ್ಡವರಲ್ಲವೇ? ಎಂದರು. ಆಗ ಅವರು ಅರ್ಥವಾಯಿತಾ? **"ಎಂದಿಗೂ ನಾನು ಮಾಡಿದ ಹಾಗೆ ಮಾಡಬೇಡಿ (ನನ್ನ ಅನುಸರಿಸಬೇಡಿ) ನಾನು ಹೇಳಿದ್ದನ್ನೇ ಮಾಡಿ"** ಎಂದರು.

ಹಾಗೆಯೇ ಒಂದು ಸಂದರ್ಭದಲ್ಲಿ ಮೆಹರ್‌ಬಾಬಾ ಅವರು ಭಕ್ತರಿಗೆ ಹೇಳಿದ ವಿಷಯ ಒಬ್ಬ ಗುರುಗಳು ಶಿಷ್ಯರೊಂದಿಗೆ ಹೋದಾಗ ಅವರು ಬಜಾರಿನಲ್ಲಿ ಒಂದು ಅಂಗಡಿಯಲ್ಲಿರುವ ಮಿಠಾಯಿಯನ್ನು ಬಾಯಿಯಲ್ಲಿ ಹಾಕಿಕೊಂಡರಂತೆ. ಅವರನ್ನು ನೋಡಿ ಶಿಷ್ಯರೆಲ್ಲರೂ ಕೂಡಾ ಒಂದೊಂದು ಮಿಠಾಯಿಯನ್ನು ಬಾಯಿಯಲ್ಲಿ ಹಾಕಿಕೊಂಡರಂತೆ. ಅನಂತರ ಗುರುಗಳು ಇನ್ನೊಂದು ಅಂಗಡಿ ಹತ್ತಿರ ಉರಿಯುತ್ತಿರುವ ಅಗ್ಗಿಷ್ಟಿಕೆಯಿಂದ ಕಣಕಣ ಉರಿಯುವ ಕೆಂಡ ಒಂದನ್ನು ತೆಗೆದುಕೊಂಡು ಬಾಯಲ್ಲಿ ಹಾಕಿಕೊಂಡರಂತೆ. ಶಿಷ್ಯರು ಆಶ್ಚರ್ಯವಾಗಿ ಹಾಗೇ ನೋಡುತ್ತಾ ಇದ್ದುಬಿಟ್ಟರಂತೆ. ಆಗ ಗುರುಗಳು ಶಿಷ್ಯರನ್ನು ನೀವು ಸಹ ಕೆಂಡವನ್ನು ಬಾಯಿನಲ್ಲಿ ಹಾಕಿಕೊಳ್ಳಿ ಅಂದರಂತೆ. ಆಗ ಅವರೆಲ್ಲಾ ಅಮ್ಮೊ!

ಬಾಯಿ ಸುಡುವುದಿಲ್ಲವೇ? ಎಂದರಂತೆ. ತಕ್ಷಣ ಅವರು ನಾನು ಹಾಕಿಕೊಂಡೆನಲ್ಲವೇ? ಎಂದು ಹೇಳಿದರಂತೆ. ನೀವು ಬೇರೆ – ನಾವು ಬೇರೆ, ನೀವು ಶಕ್ತಿವಂತರು, ನಾವು ಸಾಮಾನ್ಯರು, ನೀವು ಮಾಡಿದ ಹಾಗೆ ನಾವು ಹೇಗೆ ಮಾಡಬಲ್ಲೆವು? ಎಂದು ಆ ಶಿಷ್ಯರು ಉತ್ತರ ಕೊಟ್ಟರಂತೆ.

ಇದರಿಂದ ತಿಳಿದು ಬರುವುದು ಏನೆಂದರೆ ಸದ್ಗುರುವು ಏನಾದರೂ ಮಾಡಬಲ್ಲನೆಂದು ಅರ್ಥಮಾಡಿಕೊಳ್ಳಬೇಕು. ಅವರು ಎಲ್ಲಾದಕ್ಕೂ ಅತೀತರು. ಅವರಿಗೆ ಅಂತಹ ಶಕ್ತಿ ಇದೆ. ಅಂತವರು ಮರಳು ಬಾಯಿಗೆ ಹಾಕಿ ಇದು ಸಕ್ಕರೆ ತಿನ್ನು ಅಂದರೆ ಅದು ನಿಜವಾಗಲೂ ಸಕ್ಕರೆ ಆಗಿಬಿಡುತ್ತದೆ. ಮೆಣಸಿನಕಾಯಿ ಕೊಟ್ಟು ಇದು ಕಬ್ಬಿನ ಹಾಗೆ ಸಿಹಿಯಾಗಿ ಇರುತ್ತದೆ. ಅಂದರೆ ಅದನ್ನು ನಾವು ತಿಂದರೂ ಅದು ಸಿಹಿಯಾಗಿ ಇರುತ್ತದೆ. ಆದರೆ ಅದು ಕಾರವಾಗಿರುವುದಿಲ್ಲ. ಇದೆಲ್ಲಾ ಅವರ ಶಕ್ತಿ ಮಹತ್ವವೇ ಹೊರತು ಮತ್ತೇನೂ ಅಲ್ಲ. ಹಾಗೆಯೇ ಬಾಬಾ ಅವರು ಮಾಡುವ ಕೆಲಸಗಳು, ಅವರು ನಮಗೆ ಕೊಡುವುದು ಏನೆಂದು ಯಾರಿಗೂ ಅರ್ಥವಾಗುವುದಿಲ್ಲ. ಶಿರಡಿ ಬಾಬಾ ಅವರು ಕೂಡಾ ಅಡುಗೆ ಮಾಡುವಾಗ ಬೇಯ್ಯುತ್ತಿದ್ದ ಪದಾರ್ಥಗಳಲ್ಲಿ ಸೌಟಿನಿಂದ ಅಲ್ಲದೇ ಅವರ ಕೈಯಿಂದ ಕಲಸುತ್ತಿದ್ದರಂತೆ ಆಲೋಚಿಸಿ.



ಅವರು ಹಾಗೆ ಮಾಡಿದರೆಂದು ನಾವು ಸಹ ಕೈಹಾಕಿದರೆ ಏನಾಗುತ್ತದೆ? ಆದ್ದರಿಂದ ಅವರು ಮಾಡಿದರೆಂದು ಶಿಷ್ಯರು ಮಾಡಿದರೂ! ಇನ್ನು ಬೇರೆ ಯಾರಾದರೂ ಮಾಡಿದರೂ! ನಷ್ಟದಪಾಲಾಗುವುದು. ನಾಶವಾಗುವುದು. ಅವರನ್ನು ನೋಡಿ ಅವರಂತೆ ಮಾಡುವವರೆ. ಆದ್ದರಿಂದ ಅವರನ್ನು ಅನುಸರಿಸ ಬೇಕಾದರೆ ಅವರು ಹೇಳಿದ್ದನ್ನು ಮಾಡಬೇಕು. ಮತ್ತೊಂದು ಬಾರಿ ತಿಳಿದುಕೊಳ್ಳಿ.

**"ಸದ್ಗುರುವು ಹೇಳಿದ್ದು ಮಾಡಬೇಕು. ಮಾಡಿದ್ದು ಮಾಡಬಾರದು".**

ಕೆಲವು ಸಂದರ್ಭಗಳಲ್ಲಿ ಕೆಲವರು ಅವರು ಮಾಡಿದ್ದಾರಲ್ಲವೇ? ನಾವು ಮಾಡಿದರೆ ತಪ್ಪೇನು? ಎಂದು ವಾದಿಸು (ಚರ್ಚಿಸು)ತ್ತಿರುತ್ತಾರೆ. ಅವರ ಪ್ರಕಾರ ಅವರು ಸದ್ಗುರುವು ಒಂದೇ ಎಂದು ಭಾವಿಸುತ್ತಾರೆ. ಏಕೆಂದರೆ ಸದ್ಗುರುವು ಏನು ಮಾಡಿದರೂ, ಏನು ಮಾತನಾಡಿದರೂ ಅದಕ್ಕೆ ಒಂದು ಕಾರಣವಿರುತ್ತದೆ. ಒಂದು ಅರ್ಥವಿರುತ್ತದೆ. ಆದರೆ ಅದು ತಿಳಿದುಕೊಳ್ಳುವ ಶಕ್ತಿ, ಅರ್ಥಮಾಡಿಕೊಳ್ಳುವ ಶಕ್ತಿ, ಸಾಮಾನ್ಯರಿಗೆ ಇರುವುದಿಲ್ಲ. ಅವರು ಹಾಗೆ ಏತಕ್ಕಾಗಿ ಮಾಡುತ್ತಾರೋ ತಿಳಿಯದೆ ಹಾಗೆ ಮಾಡಿದರೆ ಅವರೇ ಮೂರ್ಖರು ಆಗುತ್ತಾರೆ. ಜೀವನದಲ್ಲಿ ನಷ್ಟದ ಪಾಲಾಗುತ್ತಾರೆ. ಕಷ್ಟಗಳ ಪಾಲಾಗುತ್ತಾರೆ.

ಆದ್ದರಿಂದ ಬುದ್ಧಿವಂತರು ಯಾರು ಅಂದರೆ ಅವರು ಹೇಳಿದ್ದನ್ನು ಮಾಡುವುದಕ್ಕೆ ಪ್ರಾಮುಖ್ಯತೆಯನ್ನು ನೀಡುವವರು ಮಾಡಿದ್ದನ್ನು ಮಾಡುವವರಲ್ಲ ಕಾರಣ ಸದ್ಗುರುವೇ 'ಸತ್ಯ' ಆದ್ದರಿಂದ ಅವರು 'ಸತ್ಯ'ದಲ್ಲಿ ಜೀವಿಸುತ್ತಾರೆ. ಸತ್ಯವನ್ನು ಅನುಸರಿಸುತ್ತಾರೆ. 'ಸತ್ಯವನ್ನೇ'

ಹೇಳುತ್ತಾರೆ. ಕಾರಣ ಅವರೇ 'ಸತ್ಯ' ಆದ್ದರಿಂದ ಅವರನ್ನು ಅನುಸರಿಸಬೇಕಾದರೆ ಅವರು ಹೇಳಿದ್ದನ್ನು ಮಾಡಬೇಕು. ಅಂತವರೇ ಸತ್ಯವನ್ನು ಅಂಟಿಕೊಂಡಿರುವವರಾಗುತ್ತಾರೆ. ಜೀವನದಲ್ಲಿ ಲಾಭವನ್ನು ಪಡೆಯುತ್ತಾರೆ. ಸದ್ಗುರುಗಳು ಏನು ಹೇಳಿದರೂ, ಏನು ಮಾಡಿದರೂ, ಇತರರ ಲಾಭಕ್ಕಾಗಿಯೇ.

ಈ ವಿಷಯವನ್ನು ನಾವು ಶಿರಡಿ ಸಾಯಿಬಾಬಾ ಅವರಿಂದ ಸ್ಪಷ್ಟವಾಗಿ ತಿಳಿದುಕೋಳ್ಳಬಹುದು. ಕಾರಣ ಅವರು ಮಾಡುವ ಕೆಲಸಗಳು, ಮಾತನಾಡುವ ಮಾತುಗಳು, ಕೆಲವು ನಮಗೆ ಅರ್ಥವಾಗುವುದಿಲ್ಲ. ಆದರೆ ಪ್ರತಿಯೊಂದು ಮಾತಿನಲ್ಲೂ ಅರ್ಥ, ಅಂತರಾರ್ಥ, ಅಡಗಿರುತ್ತದೆ ಎನ್ನುವುದನ್ನು ಮಾತ್ರ ನಾವು ತಿಳಿದುಕೊಳ್ಳಬೇಕು. ಅದರ ಅರ್ಥತಿಳಿದುಕೊಂಡರೆ ತುಂಬಾ ಲಾಭವನ್ನು ಪಡೆಯಬಹುದು.

(1) ಸತ್ಯದಲ್ಲೇ ಇರಬೇಕು ಎನ್ನುವ ವಿಷಯ ಬಾಬಾ ಒಂದು ಸಂಘಟನೆಯ ಮೂಲಕ ಹೇಗೆ ಹೇಳಿದ್ದಾರೊ ನೋಡೋಣ. (5ನೇ ಅಧ್ಯಾಯ, 45ನೇ ಪುಟ, ನೀರನ್ನು ಎಣ್ಣೆಯಾಗಿ ಮಾರ್ಪಡಿಸಿದ್ದು)

ಸಾಯಿಬಾಬಾಗೆ ದೀಪಗಳೆಂದರೆ ತುಂಬಾ ಇಷ್ಟ. ಅವರು ಆ ಊರಿನಲ್ಲಿ ಎಣ್ಣೆ ಮಾರುವ ಅಂಗಡಿಯಿವರನ್ನು ಎಣ್ಣೆ ಕೇಳಿ ತಂದು ಮಸೀದಿಯಲ್ಲಿ ರಾತ್ರಿಯೆಲ್ಲಾ ದೀಪಗಳನ್ನು ಬೆಳಗಿಸುತ್ತಿರು. ಕೆಲವು ದಿನಗಳು ಹೀಗೆ ನಡೆಯಿತು. ಒಂದು ದಿನ ಎಣ್ಣೆ ಕೊಡುವ ಅಂಗಡಿಯವರೆಲ್ಲರೂ ಒಂದಾಗಿ ಮಾತನಾಡಿಕೊಂಡು ಬಾಬಾ ಅವರಿಗೆ ಎಣ್ಣೆ ಕೊಡಬಾರದೆಂದು ನಿಶ್ಚಯಿಸಿಕೊಂಡರು (ತೀರ್ಮಾನಿಸಿದರು). ಬಾಬಾ ಅವರು ಎಂದಿನಂತೆ ಅಂಗಡಿಗಳಿಗೆ ಹೋದಾಗ ಎಣ್ಣೆ ಇಲ್ಲ ಎಂದರು. ಬಾಬಾ ಕಳವಳಗೊಳ್ಳದೇ ಬರೀ ದೀಪದ ಬತ್ತಿ ಮಾತ್ರವೇ ಹಣತೆ ಯಲ್ಲಿ ಹಾಕಿಟ್ಟಿದ್ದರು. ಎಣ್ಣೆ ವ್ಯಾಪಾರಿಗಳು ಇದನ್ನೆಲ್ಲಾ ಆಸಕ್ತಿಯಿಂದ ಗಮನಿಸುತ್ತಿದ್ದರು. ಬಾಬಾ ಅವರು ಎರಡು, ಮೂರು, ಹನಿಗಳು ಉಳಿದಿರುವ ಎಣ್ಣೆಯ ಡಬ್ಬಿಯಲ್ಲಿ ನೀರನ್ನು ಹಾಕಿ ತಿರುಗಿಸಿ (ಕಲಸಿ) ಆ ನೀರನ್ನು ಕುಡಿದುಬಿಟ್ಟರು. ಪುನಃ ಆ ಡಬ್ಬಿಯಲ್ಲಿ ನೀರನ್ನು ಹಾಕಿ ಆ ನೀರನ್ನು ಹಣತೆಗಳಲ್ಲಿ ತುಂಬಿಸಿದರು. ದೂರದಲ್ಲಿ ನಿಂತು ಪರೀಕ್ಷಿಸುತ್ತಿರುವ ಅಂಗಡಿಯವರು ವಿಸ್ಮಯ ಹೊಂದುವ ಹಾಗೆ ದೀಪದ ಹಣತೆಗಳು ಬೆಳಗಿನ ಜಾವದವರೆಗೂ ಬೆಳಗಿದವು. ಇದೆಲ್ಲವನ್ನು ನೋಡಿ ಅಂಗಡಿಯವರು ಪಶ್ಚಾತ್ತಾಪದಿಂದ ಬಾಬಾರವರನ್ನು ಮನ್ನಿಸಿ ಎಂದು ಕೇಳಿಕೊಂಡರು. ಆಗ ಬಾಬಾ ಅವರನ್ನು ಕ್ಷಮಿಸಿ **"ಇನ್ನು ಮುಂದೆ ಆದರೂ ಸತ್ಯವನ್ನು ಅಂಟಿಕೊಂಡಿರಿ (ಸತ್ಯದಲ್ಲೇ ಇರಿ) ಎಂದು ಹಿತ ವಚನಗಳನ್ನು ಹೇಳಿ ಕಳುಹಿಸಿದರು"**.

ಇಲ್ಲಿ ಬಾಬಾ ಸತ್ಯವನ್ನು ಅಂಟಿಕೊಂಡಿರಿ (ಸತ್ಯದಲ್ಲೇ ಇರಿ) ಎಂದು ಹೇಳಿದ್ದಾರೆಂದರೆ ಸತ್ಯವು ಯಾರೆಂದರೆ ಅದು ಬಾಬಾರವರೇ ಅಂದರೆ ಬಾಬಾರನ್ನು ಅನುಸರಿಸಿ ಎಂದು

ಹೇಳಿದ್ದಾರೆ. ಅಂದರೆ ಬಾಬಾ ಅವರು ಹೇಳಿದ ಹಾಗೆ ಮಾಡಿ ಎಂದು ಅರ್ಥ. ಬಾಬಾಗೆ ದೀಪಗಳೆಂದರೆ ಇಷ್ಟ. ಏಕೆಂದರೆ ದೀಪ ಜ್ಞಾನಕ್ಕೆ ಪ್ರತೀಕ. ಬೆಳಗುವ ದೀಪದ ಜ್ಯೋತಿ ಆತ್ಮ ಜ್ಯೋತಿಗೆ ಸಂಕೇತ. ಅಂದರೆ ಬಾಬಾ ಅವರಿಗೆ ಜ್ಞಾನವೆಂದರೂ, ಆತ್ಮ ಎಂದರೂ, ಇಷ್ಟವೆಂದು ನಾವು ತಿಳಿದುಕೊಳ್ಳಬಹುದು. ಲೋಕದಲ್ಲಿ ಅಂತಹ ಜ್ಞಾನವನ್ನು ಪ್ರಕಾಶಿಸುವ ಹಾಗೆ ಮಾಡಲು ಯಾರು ಸಹಕರಿಸುತ್ತಾರೋ ಅವರು ಭವಿಷತ್ತಿನಲ್ಲಿ ತುಂಬಾ ಲಾಭವನ್ನು ಪಡೆಯುತ್ತಾರೆ. ಆ ವ್ಯಾಪರಸ್ತರಿಗೆಲ್ಲರಿಗೂ ಲಾಭ ಉಂಟಾಗಲೆಂದೇ ಬಾಬಾ ಅವರ ಹತ್ತಿರ ಎಣ್ಣೆ ತೆಗೆದುಕೊಳ್ಳುತ್ತಿದ್ದರು. ಇದು ಅವರಿಗೆ ಅರ್ಥವಾಗದೇ ಎಣ್ಣೆ ಕೊಡಲು ನಿರಾಕರಿಸಿದರು. ಹಾಗೆ ಬಾಬಾ ತಮ್ಮ ಮಹಿಮೆಯನ್ನು ತೋರಿಸಿ ಅವರಿಗೆ ಸತ್ಯವನ್ನು ಅಂಟಿಕೊಂಡಿರಿ (ಸತ್ಯದಲ್ಲಿರಿ) ಎಂದು ಬೋಧಿಸಿದರು. ಅಂದರೆ ಅವರು ಏನು ಹೇಳಿದರೆ ಅದು ಮಾಡಿ ಎಂದರು. ಅದು ಅವರಿಗೆ ಲಾಭ ಎಂದು ತಿಳಿಯಪಡಿಸಿದರು.

(2) ಹಾಗೇ ಅವರು ಭಿಕ್ಷೆ ಬೇಡುತ್ತಿದ್ದರು ಅಂದರೆ ಅಂತಹ ಯೋಗಿಗೆ ಯಾರು ಭಿಕ್ಷೆ ನೀಡುತ್ತಾರೋ ಅವರು ಅದರ ಫಲಿತಾಂಶವನ್ನು ಪಡೆಯುತ್ತಾರೆ. ಹಾಗೆ ಅವರಿಗೆ ಭಿಕ್ಷೆ ಬೇಡುವುದರಿಂದ ಬಾಬಾ ಆ ಅವಕಾಶವನ್ನು ಕಲ್ಪಿಸುತ್ತಿದ್ದರು. ಅಷ್ಟೇ ಅಲ್ಲ ಯಾರಿಗಾದರೂ ಭಿಕ್ಷೆ ಬೇಡಲು ಅಹಂ ಅಡ್ಡ ಬರುತ್ತದೆ. ಅವರನ್ನು ನಾನು ಏಕೆ ಕೇಳಲಿ? ಎಂದು. ಅಂದರೆ ಅಂತಹ ಶಕ್ತಿಗಳಿರುವ ಬಾಬಾರವರೇ ಭಿಕ್ಷೆ ಕೇಳುತ್ತಿದ್ದಾರೆಂದರೆ ಅವರಲ್ಲಿ ಅಹಂಕಾರವಿಲ್ಲವೆಂದು ಅರ್ಥವಲ್ಲವೇ. ಹಾಗೆಯೇ ಎಲ್ಲರೂ ಅಹಂಕಾರ ರಹಿತರಾಗಬೇಕೆನ್ನುವುದೇ ಅವರ ಕೆಲಸಗಳಲ್ಲಿರುವ ಸಂದೇಶ. ನಿಜಕ್ಕೂ ಬಾಬಾ ಭಿಕ್ಷೆ ಬೇಡಬೇಕಾ? ಅವರಿಗೆ ಯಾರೂ ಊಟ ತಂದು ಕೊಡುವುದಿಲ್ಲವೇ? ನನ್ನ ಹಾಗೆ ನೀವು ಸಹ ಅಹಂಕಾರರಹಿತರಾಗಿ ಎಂದು ಹೇಳುವುದೇ ಅವರು ಭಿಕ್ಷೆ ಬೇಡಲು ಕಾರಣವಾಗಿದೆ. ಅಷ್ಟೇ ಅಲ್ಲಾ ಬಾಬಾ ಅವರ ಚೇಷ್ಟೆಗಳು, ಮಾತುಗಳು, ಮರ್ಮದಿಂದಕೂಡಿದೆ. ಅಂತರಾರ್ಥಗಳಿಂದ ಸಂದೇಶಾತ್ಮಕವಾಗಿ ಇರುತ್ತವೆ. ಅಜ್ಞಾನಗಳ ಜ್ಞಾನವನ್ನು ತೊಲಗಿಸುವಂತೆ ಇರುತ್ತವೆ. ಮೂರ್ಖರ ಮೂರ್ಖತ್ವವನ್ನು ತೊಲಗಿಸುವ ಹಾಗೆ ಇರುತ್ತವೆ. ಆದ್ದರಿಂದ ಅವರ ಮಾತುಗಳು, ಕರ್ಮಗಳಲ್ಲಿ, ಇರುವ ಭಾಹ್ಯಾರ್ಥಗಳನ್ನು ತೆಗೆದುಕೊಳ್ಳಬಾರದು. ಹಾಗೆ ತೆಗೆದುಕೊಳ್ಳುವವರು ಕಷ್ಟಗಳನ್ನು ಅನುಭವಿಸುತ್ತಾರೆ. ಹೀಗೆ ನಾವು ಅನೇಕ ಉದಾಹರಣೆಗಳನ್ನು ಅವರ ಜೀವನದಿಂದ ತಿಳಿದುಕೊಳ್ಳಬಹುದು.

ಆದ್ದರಿಂದ **"ಸದ್ಗುರುಗಳು ಮಾಡಿದ್ದನ್ನು ಮಾಡಬಾರದು ಹೇಳಿದ್ದನ್ನು ಮಾಡಬೇಕು"**.

•

# ಬಾಬಾರವರನ್ನು ಕೋರ ಬೇಕಾ?



ಬಾಬಾ ಗುಡಿಗೆ ಹೋಗಿ ನಮ್ಮ ಕಷ್ಟಗಳನ್ನು ಸಮಸ್ಯೆಗಳನ್ನು, ಹೇಳಿಕೊಳ್ಳುತ್ತಿದ್ದೇವೆ. ಬಯಕೆಗಳನ್ನು ಬೇಡುತ್ತಿದ್ದೇವೆ. ಸ್ವಲ್ಪ ಯೋಚಿಸಿ ಎಲ್ಲಾ ವಿಷಯ ಅವರಿಗೆ ತಿಳಿದಾಗ ನಾವು ಪಡುವ ಕಷ್ಟಗಳು ಅವರಿಗೆ ತಿಳಿಯುವುದಿಲ್ಲವೇ? ನಮ್ಮ ಸಮಸ್ಯೆಗಳು ಅವರಿಗೆ ಗೊತ್ತಿಲ್ಲವೇ? ನಮಗೆ ಏನು ಬೇಕು ಅವರಿಗೆ ಗೊತ್ತಿಲ್ಲವಾ? ನನಗೆ ಎಲ್ಲ ಗೊತ್ತಿದೆಯೆಂದಲ್ಲವೇ ಬಾಬಾ ಹೇಳುತ್ತಿರುವರು. ಪ್ರತ್ಯೇಕ್ಷವಾಗಿ ಪುನಃ ಅವರಿಗೆ ಹೇಳಬೇಕೇ? ತಿಳಿಯದೇ ಇರುವವರಿಗೆ ಹೇಳಬೇಕು. ಎಲ್ಲಾ ತಿಳಿದಿರುವ ಬಾಬಾಗೆ ಹೇಳುವುದೆಂದರೆ ಅವರ ಶಕ್ತಿಯನ್ನು ತಿಳಿದುಕೊಳ್ಳದಿರುವುದೇ! ಅವರ ಶಕ್ತಿಯನ್ನು ಕಡಿಮೆ (ಅಂದಾಜು) ಮಾಡಿ ಪ್ರವರ್ತಿಸುವುದು. ಎಲ್ಲಾ ತಿಳಿದಿರುವವರನ್ನು ಕೋರಬಾರದು. **ಮಾಡುವುದನ್ನು ಮಾಡಿದರೆ ಪಡೆಯುವುದನ್ನು ಪಡೆಯುತ್ತೇವೆಂದು ತಿಳಿದುಕೊಳ್ಳಬೇಕು. "ಬೇಡುವುದಕ್ಕೆ ಪ್ರಾಮುಖ್ಯತೆ ನೀಡಬಾರದು. ಒಳ್ಳೇ ಕರ್ಮ ಮಾಡುವುದಕ್ಕೆ ಪ್ರಾಮುಖ್ಯತೆ ಕೊಡಬೇಕು".** ನಮಗೆ ಕಷ್ಟಗಳು ಬಂದಾಗ ಏನು ಮಾಡಬೇಕು ಎನ್ನುವ ಸಂದೇಹವುಂಟಾಗಬಹುದು. ಆಗ ಏನು ಮಾಡಬೇಕೆಂದು ಅವರೇ ಹೇಳಿದ್ದಾರೆ (3ನೇ ಅಧ್ಯಾಯ 27ನೇ ಪುಟದಲ್ಲಿ) **"ಯಾರು ತಮ್ಮ ದೃಷ್ಟಿಯನ್ನು ನನ್ನ ಮೇಲೆ ಇಡುತ್ತಾರೋ ಅವರಿಗೆ ಯಾವ ಹಾನಿಯಾಗಲಿ, ನೋವಾಗಲಿ, ಆಗುವುದಿಲ್ಲ. ನನ್ನ ಮರೆತವರನ್ನು ಮಾಯೆ ಶಿಕ್ಷಿಸುವುದು"**. ಎಂದು ಸ್ಪಷ್ಟವಾಗಿ ಹೇಳಿದರು

ಅಂದರೆ ಅವರನ್ನು ಬೇಡುವುದಲ್ಲ ಅವರ ಮೇಲೆ ದೃಷ್ಟಿ ಇಡಬೇಕು ಎಂದು ಅವರು ಹೇಳುವ ಸಂದೇಶ. ಆದರೆ ಎಲ್ಲರು ಅವರ ಮೇಲೆ ದೃಷ್ಟಿಯಿಡುವುದನ್ನು ಬಿಟ್ಟು ಬೇಡುವುದಕ್ಕೆ ಪ್ರಾಮುಖ್ಯತೆಯನ್ನು ಕೊಡುತ್ತಿದ್ದಾರೆ! ಅಂದರೆ ಅವರು ಹೇಳಿದ್ದು ಒಂದು ಎಲ್ಲರು ಮಾಡುತ್ತಿರುವುದು ಒಂದು. ಅವರು ಹೇಳಿದ ಹಾಗೆ ಮಾಡದೇ ಹೋದರೆ ಫಲ ಹೇಗೆ ಸಿಗುತ್ತದೆ? ಅವರ ಅನುಗ್ರಹವನ್ನು ಹೇಗೆ ಪಡೆಯಬಲ್ಲರು?

ಅವರ ಮೇಲೆ ದೃಷ್ಟಿ ಇಡಬೇಕೆಂದರೆ ಅವರು ಹೇಗೆ ಇರುತ್ತಾರೆ? ಎಲ್ಲಿರುತ್ತಾರೆ? ಅಂದರೆ ಅವರು ಆತ್ಮ ರೂಪದಲ್ಲಿ ಎಲ್ಲರಲ್ಲಿ ಇರುತ್ತಾರೆ. ಈ ವಿಷಯವೂ ಕೂಡ ಶ್ರೀ ಸಾಯಿ ಸ್ವಚ್ಚರಿತ್ರೆಯಲ್ಲಿ ಸಾಯಿ ಬಾಬಾ ಯಾರು? ಎನ್ನುವ ಶಿರ್ಷಿಕೆಯಲ್ಲಿ ಜಿ. ಜಿ. ನಾರ್ಕೇರವರು ಹೇಳಿದ್ದಾರೆ. **"ಬಾಬಾ ನನ್ನ ಹೃದಯದಲ್ಲಿರುವ ಆಲೋಚನೆಗಳನ್ನು, ಬಯಕೆಗಳನ್ನು, ಗ್ರಹಿಸುತ್ತಿದ್ದರು. ಅವರು ನನ್ನಲ್ಲಿರುವ ಭಗವಂತ.** ಅಂದರೆ ಯಾರೇ ಆದರೂ ಅವರು ತಮ್ಮಲ್ಲಿರುವ ಬಾಬಾ ಮೇಲೆ ಅಂದರೆ "ಆತ್ಮ" ದ ಮೇಲೆ ದೃಷ್ಟಿ ಇಡಬೇಕು. ಅಂದರೆ ಅಂತರ್ಮುಖರಾಗಬೇಕು ಅಂದರೆ "ಧ್ಯಾನ" ಮಾಡಬೇಕು. ಅಂದರೆ ಯಾರು ಧ್ಯಾನ ಮಾಡುತ್ತಾರೆಯೋ ಅವರು ಬಾಬಾ ಮೇಲೆ ದೃಷ್ಟಿ ಇಟ್ಟ ಹಾಗೆ. ಅಂದರೆ ಬಾಬಾ ಹೇಳಿದ ಹಾಗೆ ಮಾಡುತ್ತಿದ್ದಾರೆಂದು ಅರ್ಥ. ಅಂತವರಿಗೆ ಬಾಬಾ ಹೇಳಿದ ಹಾಗೆ ಅವರ ಅನುಗ್ರಹ ಸಿಗುತ್ತದೆ. ಅಂತವರಿಗೆ ಯಾವ ಹಾನಿಯೂ ಆಗುವುದಿಲ್ಲ. ಅವರ ಬಾಧೆಗಳೆಲ್ಲಾ

ಹೋಗುತ್ತವೆ ಇದು ಬಾಬಾ ಸಂದೇಶ. ಆದ್ದರಿಂದ ಬಾಬಾ ಗುಡಿಗೆ ಹೋದವರೆಲ್ಲಾ ಅಲ್ಲೇ ಇರುವ ಧ್ಯಾನ ಮಂದಿರಗಳಲ್ಲಿ ಕುಳಿತುಕೊಂಡು ಧ್ಯಾನದ ಮೂಲಕ ಬಾಬಾ ಮೇಲೆ ದೃಷ್ಟಿ ಇಡಬೇಕು. ಅದಕ್ಕೆ ಬಾಬಾ ಗುಡಿಗಳಲ್ಲಿ ಧ್ಯಾನ ಮಂದಿರಗಳನ್ನು ನಿರ್ಮಿಸುವುದು ಮುಖ್ಯಕಾರಣ.

ಬಾಬಾ ಗುಡಿಗಳಲ್ಲಿ ಧ್ಯಾನ ಮಂದಿರಗಳನ್ನು ಏರ್ಪಾಡು ಮಾಡುತ್ತಿದ್ದಾರೆ. ಆದರೆ ಯಾರೂ ಧ್ಯಾನ ಮಾಡುತ್ತಿಲ್ಲ. ಬಾಬಾ ಮೇಲೆ ದೃಷ್ಟಿ ಇಡುತ್ತಿಲ್ಲ. ಯಾವಾಗಲೂ ಬಾಬಾ ಪ್ರತಿರೂಪದ ಮೇಲೆ ದೃಷ್ಟಿ ಇಡುತ್ತಿದ್ದಾರೆ. ಬಯಕೆಗಳನ್ನು ಬೇಡುವುದರಲ್ಲಿ ಸಮಯವನ್ನು ಕಳೆಯುತ್ತಿದ್ದಾರೆ ಅಷ್ಟೇ ವಿನಹ ಅವರ ಸತ್ಯರೂಪವಾದ ಆತ್ಮದ ಮೇಲೆ ದೃಷ್ಟಿ ಇಡುತ್ತಿಲ್ಲ. ಯಾರೂ ಧ್ಯಾನ ಮಾಡುತ್ತಿಲ್ಲ. ಬಾಬಾ ಹೇಳಿದ್ದನ್ನು ಯಾರೂ ಅರ್ಥ ಮಾಡಿಕೊಳ್ಳುತ್ತಿಲ್ಲ. ಆದ್ದರಿಂದ ಬಾಬಾ ಹೇಳಿರುವಹಾಗೆ ಅವರ ಮೇಲೆ ಅಂದರೆ ಆತ್ಮದ ಮೇಲೆ ದೃಷ್ಟಿ ಇಡಬೇಕು ಅಂದರೆ ಧ್ಯಾನ ಮಾಡಬೇಕು. ಇದೇ ಬಾಬಾ ಸಂದೇಶ.

43–44ನೇಯ ಅಧ್ಯಾಯದಲ್ಲಿ 323ನೇಯ ಪುಟದಲ್ಲಿ ಅಮೃತತುಲ್ಯವಾದ ಬಾಬಾ ವಾಕ್ಯಗಳು ಎನ್ನುವ ಶೀರ್ಷಿಕೆಯಲ್ಲಿ ಬಾಬಾ ಅವರು ಹೇಳಿದ್ದನ್ನು ನೋಡೋಣ.

**"ಯಾರು ಸರ್ವಸ್ವ ಶರಣಾಗತಿಯನ್ನು ಹೊಂದಿ ನನ್ನನ್ನು ಧ್ಯಾನಿಸಿದರೆ ಅವರಿಗೆ ನಾನು ಋಣಿ. ಅವರಿಗೆ ಮೋಕ್ಷವನ್ನು ನೀಡಿ ಅವರ ಋಣವನ್ನು ತೀರಿಸಿಕೊಳ್ಳುತ್ತೇವೆ. ಯಾರು ನನ್ನನ್ನು (ಆತ್ಮವನ್ನು) ಚಿಂತಿಸುತ್ತಾ ನನ್ನ ಕುರಿತು ಆತ್ಮದ ಕುರಿತು ಧೀಕ್ಷೆಯಿಂದ ಇರುವವರು. ಯಾರು ನನಗೆ ಅರ್ಪಿಸದೇ ಏನು ತಿನ್ನುವುದಿಲ್ಲವೋ (ಅಂದರೆ ಯಾವುದೋ ಒಂದು ಪ್ರಾಣಿಗೆ ತಿನ್ನಿಸಿ ತಾನು ತಿನ್ನಬೇಕು ಇದೇ ವಿಷಯವನ್ನು ಬಾಬಾ ಸ್ವಯಂ ತಾವೇ 9ನೇಯ ಅಧ್ಯಯದಲ್ಲಿ 8ನೇ ಪುಟದಲ್ಲಿ ಹೇಳಿದ್ದಾರೆ) ಅಂತವರ ಮೇಲೆ ನಾನು ಆಧಾರಪಟ್ಟಿರುತ್ತೇನೆ ಯಾರು ನನ್ನ ಸನ್ನಿಧಾನಕ್ಕೆ (ಆತ್ಮದ ಹತ್ತಿರಕ್ಕೆ) ಬರುವರು ಅವರು ನದಿ ಸಮುದ್ರದಲ್ಲಿ ಬೆರೆತುಹೋದ ಹಾಗೆ ನನ್ನಲ್ಲಿ ಒಂದಾಗುವರು. ಆದ್ದರಿಂದ ನೀವು ಗರ್ವ ಅಹಂಕಾರ ಸ್ವಲ್ಪವೂ ಇರದೇ ನಿನ್ನ ದೇಹದಲ್ಲಿರುವ ನನ್ನನ್ನು (ನಿನ್ನಲ್ಲಿರುವ ನನ್ನನ್ನು) ಆತ್ಮವನ್ನು ಸರ್ವಸ್ವ ಶರಣಾಗತಿ ಬೇಡಬೇಕು"** ಈ ವಿಧವಾಗಿ ಬಾಬಾ ತುಂಬಾ ಸ್ಪಷ್ಟವಾಗಿ ಧ್ಯಾನ ಮಾಡಿ ಎಂದು ಹೇಳಿದ್ದಾರೆ.

ಇನ್ನೂ ಸ್ವಲ್ಪ ಆಳವಾಗಿ ಯೋಚಿಸಿ ಬಾಬಾಗೆ ಸುಪ್ರಭಾತ ಹಾಡಿ ಎಚ್ಚರಿಕೆಗೊಳಿಸುವುದು ಅವಶ್ಯಕವೇ? ಸದ್ಯಕ್ಕೆ ಶರೀರವಿಲ್ಲದೇ ಅವರಿಗೆ ಹಸಿವು ಇರುತ್ತದೆಯೇ? ಅವರಿಗೆ ನೈವೇದ್ಯದ ಅವಶ್ಯಕತೆ ಇದೆಯೇ? ಯಾರು ಎಲ್ಲಿ ಇದ್ದರೂ, ಏನು ಮಾಡುತ್ತಿದ್ದರೂ, ತಿಳಿದುಕೋಳ್ಳಲಾಗುವ ಶಕ್ತಿಯಿರುವ ಬಾಬಾಗೆ ಮೈಕುಗಳನ್ನಿಟ್ಟು ಭಜನೆ ಮಾಡಬೇಕಾ? ನಿಮ್ಮ ಮನಸ್ಸಿನಲ್ಲಿ ಏನಿದೆ ಎಂದು ತಿಳಿದುಕೊಳ್ಳುವ ಶಕ್ತಿ ಇರುವ ಬಾಬಾಗೆ ಪೂಜೆ ಮಾಡುವುದಕ್ಕಿಂತ ಮುಂಚೆ ಸಂಕಲ್ಪ ಮಾಡಬೇಕಾ? ಎಲ್ಲಾ ತಿಳಿದಿರುವ ಬಾಬಾಗೆ ನಮ್ಮ ಹೆಸರು ಹೇಳಬೇಕಾದ ಅವಶ್ಯಕತೆ ಇದೆಯಾ? ನಿಮ್ಮ ಹೆಸರು ಹೇಳಿದರೆ ವಿನಹ ನೀವೇ ಪೂಜೆ ಮಾಡುತ್ತಿದ್ದೀರೆಂಬ ವಿಷಯ ಅವರು ತಿಳಿದುಕೋಳ್ಳಲಾರರು? ಹೆಸರೇ ಅಲ್ಲ ಹೆಸರಿನ ಜೊತೆ ಗೋತ್ರವೂ ಸಹ ಹೇಳುತ್ತಿರುತ್ತೇವೆ – ನಿಜಕ್ಕೂ ಬಾಬಾಗೆ ಇವೆಲ್ಲಾ ಅವಶ್ಯಕವೇ?

ಯೋಚಿಸಿ ಅವರ ಶಕ್ತಿಯನ್ನು ಅರ್ಥಮಾಡಿಕೊಂಡರೆ ಇವೆಲ್ಲಾ ಮಾಡುತ್ತೇವೆಯೇ? ಇವೆಲ್ಲಾ ಮಾಡಬೇಕೆಂದರೆ ನಾವು ಅವರ ಶಕ್ತಿಗೆ ತಕ್ಕಂತೆ ಪ್ರವರ್ತಿಸುತ್ತಿದ್ದೇವೆಯೇ? ಖಂಡಿತವಾಗಿಯೂ ಅವರ ಶಕ್ತಿ ಕುಗ್ಗಿಸಿದ ಹಾಗೆ.

ಒಂದು ರೀತಿಯಲ್ಲಿ ನೋಡಿದರೆ ಎಲ್ಲಾ ನಮ್ಮ ತೃಪ್ತಿಗಾಗಿ ಮಾಡುವ ಕೆಲಸಗಳೇ ವಿನಹ ಬಾಬಾರವರಿಗೆ ಇವೆಲ್ಲಾ ಅವಶ್ಯವಿಲ್ಲ. ಅವರಿಗೆ ಬೇಕಾಗಿರುವುದು ಅವರ ಭಕ್ತರು ಅವರು ಹೇಳಿದ ಹಾಗೆ ನಡೆದುಕೊಳ್ಳುವುದು ಅವರು ಅನುಸರಿಸುವ ಮಾರ್ಗವನ್ನು ಅನುಸರಿಸುವುದು. ಆದ್ದರಿಂದ ಅವರು ಹೇಳಿರುವ ಪ್ರತಿಯೊಂದು ಮಾತನ್ನು, ಪ್ರತಿಯೊಂದು ಸಂದೇಶವನ್ನು ಅರ್ಥಮಾಡಿಕೊಳ್ಳಬೇಕು. ಆಚರಿಸಬೇಕು. ಹಾಗೆ ಮಾಡುವವರೇ ಬಾಬಾರವರ ನಿಜವಾದ ಭಕ್ತರು ಅವರೇ ಧ್ಯಾನ ಜೀವಿಗಳು.

ಬಾಬಾ ಹೇಳಿದಹಾಗೆ ಆಚರಿಸದೇ ಅವರನ್ನು ಬಯಕೆಗಳಿಗಾಗಿ ಮಾತ್ರ

ಆರಾಧಿಸುವವರು. ಅವರ ಭಕ್ತರು ಹೇಗೆ ಆಗುತ್ತಾರೆ. ನಿಜಕ್ಕೂ ಇವೆಲ್ಲಾ ಬರೆಯಲು ಕಾರಣ ಎಲ್ಲರು ಮಾಡುವ ಕೆಲಸಗಳನ್ನು ವಿಮರ್ಶಿಸಲಿಕ್ಕಾಗಿ ಅಲ್ಲ. ಬಾಬಾ ಅವರನ್ನು ಅರ್ಥಮಾಡಿಕೊಂಡು ಬಾಬಾರವರ ಸಂದೇಶದ ಪ್ರಕಾರ ಜೀವಿಸಿ ಎಂದು ಮಾತ್ರ ಇಲ್ಲಿ ತಿಳಿಸಲಾಗುತ್ತದೆ. ನೀವು ಬೇಕಾದರೆ ನಿಮಗೆ ತೃಪ್ತಿಯನ್ನು ನೀಡುವ ಎಲ್ಲಾ ಕೆಲಸಗಳನ್ನು ಮಾಡಿ. ಆದರೆ ಮುಖ್ಯವಾಗಿ ಬಾಬಾ ಸಂದೇಶವನ್ನು ಅರ್ಥಮಾಡಿಕೊಂಡು ಆಚರಿಸಿ. ಮುಖ್ಯವಾಗಿ "ನೀವು ಮಾಡುವ ಕೆಲಸಗಳು ನಿಮಗೆ ತೃಪ್ತಿಯನ್ನು ಉಂಟುಮಾಡುವುದಿಲ್ಲ. ಬಾಬಾ ಅವರಿಗೆ ತೃಪ್ತಿ ಆಗುತ್ತಿದೆಯೋ? ಇಲ್ಲವೋ?" ಎನ್ನುವುದನ್ನು ಯೋಚಿಸಬೇಕು. ಅಷ್ಟೇ ಅಲ್ಲ "ನೀವು ಮಾಡುವ ಕೆಲಸ ನಿಮಗೆ ಇಷ್ಟವಾಗುವ ಹಾಗೆ ಅಲ್ಲ ಬಾಬಾ ಮೆಚ್ಚುವ ಹಾಗೆ ಇರಬೇಕು".

ಮುಖ್ಯವಾಗಿ ಯಾರಾದರೂ ಸರಿಯೇ ಬಾಬಾ ಶಕ್ತಿಗೆ ತಕ್ಕಹಾಗೆ ಪ್ರವರ್ತಿಸಬೇಕು. ಬಾಬಾರವರ ಶಕ್ತಿಯನ್ನು ತಿಳಿದುಕೊಳ್ಳಬೇಕು. ಬಾಬಾರವರ ಶಕ್ತಿಯನ್ನು ಕಡಿಮೆ ಅಂದಾಜು ಹಾಕಬಾರದು. ನಾವು ಅವರ ಶಕ್ತಿಯನ್ನು ಅರಿತ್ತಿದ್ದೀವಾ? ಇಲ್ಲವಾ? ಎನ್ನುವುದು ನಮ್ಮ ಪ್ರವರ್ತನೆಯಿಂದ ಸ್ಪಷ್ಟವಾಗಿ ತಿಳಿದುಕೊಳ್ಳಬಹುದು.

ಬಾಬಾರವರ ಶಕ್ತಿಗೆ ತಕ್ಕಹಾಗೆ ಪ್ರವರ್ತಿಸುವುದು ಎಂದರೇ? ಅವರು ನಮ್ಮ ಕಣ್ಣುಗಳಿಗೆ ಕಾಣಿಸುವ ಶರೀರವಲ್ಲ. ಕಾಣಿಸದ ಆತ್ಮ ಎಂದು ತಿಳಿದುಕೊಳ್ಳಬೇಕು. ಅವರ ಮೇಲೆ ದೃಷ್ಟಿ ಇಡಬೇಕು ಅಂದರೆ ಅರ್ಥ ನಾವು ಧ್ಯಾನ ಮಾಡಬೇಕು ಅಂದರೆ ಗುಡಿಗೆ ಹೋದಾಗ ಮೊದಲು ಕಾಣಿಸುವ ಅವರ 'ಪ್ರತಿರೂಪ' ವನ್ನು (ವಿಗ್ರಹವನ್ನು) ನೋಡಿ, ಅದಕ್ಕೆ ತೃಪ್ತಿ ಪಡದೇ ಅಲ್ಲೇ ಇರುವ ಧ್ಯಾನಮಂದಿರಗಳಲ್ಲಿ ಧ್ಯಾನ ಮಾಡುವುದರ ಮೂಲಕ ಅವರು ಕಾಣಿಸಿದ 'ಸತ್ಯರೂಪವಾದ ಆತ್ಮ'ವನ್ನು ದರ್ಶಿಸಲು ಪ್ರಯತ್ನಿಸಬೇಕು. ಹಾಗೆ ಮಾಡಿದವರಿಗೆ ಬಾಬಾರವರ 'ಸತ್ಯರೂಪ ದರ್ಶನ' ಲಭಿಸುತ್ತದೆ. ಇದನ್ನೇ 'ಆತ್ಮ ಸಾಕ್ಷಾತ್ಕಾರ' ಎಂದು ಕೂಡ ಹೇಳುತ್ತಾರೆ. ಅದು ಲಭಿಸಿದವರ ಜೀವನವೇ ಧನ್ಯ. ಅವರಿಗೆ ಬಯಕೆಗಳೇನೂ ಇರುವುದಿಲ್ಲ. ಅವರು ಮುಕ್ತಿಯನ್ನು ಹೊಂದಿದ ಹಾಗೆ ಅಂದರೆ ಎಲ್ಲಾ ದುಃಖಗಳಿಂದ ಹೊರಬಂದಾಗ ಆನಂದವಲ್ಲ, ಅವರು ಬ್ರಹ್ಮಾನಂದವನ್ನು, ಶಾಶ್ವತ ಆನಂದವನ್ನು ಹೊಂದಿದಹಾಗೆ ನೆನಪಿನಲ್ಲಿಟ್ಟುಕೊಳ್ಳಿ. "ವಿಗ್ರಹ ದರ್ಶನ ಮಾಡಿಕೊಂಡರೆ ತೃಪ್ತಿಸಿಗುತ್ತದೆ. ಆದರೆ ಆತ್ಮ ದರ್ಶನ ಮಾಡಿಕೊಂಡರೆ 'ಮುಕ್ತಿ' ಸಿಗುತ್ತದೆ"

ನಿಜವಾಗಲೂ ಮಾನವರ ಜೀವನದ ಗುರಿ ಕೂಡಾ ಇದೆ! ಯಾವ ಮಾನವನಾಗಲಿ

ಸಾಧಿಸಬೇಕಾಗಿರುವುದು ಇದೇ! ಹಾಗೆ "ಆತ್ಮಸಾತ್ಕಾರ" ವನ್ನು ಹೊಂದಿದವರು ಮಾಯೆಯಿಂದ ಹೊರಗೆ ಬಂದ ಹಾಗೆ! ಜ್ಞಾನವನ್ನು ಪಡೆದ ಹಾಗೆ! ಆದ್ದರಿಂದ ಬಾಬಾ ಅವರು ಹೇಳಿದ ಹಾಗೆ ಅವರ ಮೇಲೆ ಧ್ಯಾನದ ಮೂಲಕ ದೃಷ್ಟಿ ಇಡೋಣ.

# ಬಾಬಾ ಬೋಧಿಸಿದ ಬ್ರಹ್ಮಜ್ಞಾನ ಅಥವಾ ಆತ್ಮಸಾಕ್ಷಾತ್ಕಾರ



ಬಾಬಾ ಅವರ ಮೇಲೆ ದೃಷ್ಟಿ ಇರಿಸಿದವರು ಅಂದರೆ ಧ್ಯಾನ ಮಾಡುವವರು ನಿಧಾನವಾಗಿ ಬ್ರಹ್ಮಜ್ಞಾನವನ್ನು ಪಡೆಯುತ್ತಾರೆ. ಅಂದರೆ ಆತ್ಮಸಾಕ್ಷಾತ್ಕಾರವನ್ನು ಹೊಂದುತ್ತಾರೆ. ಆತ್ಮಸಾಕ್ಷಾತ್ಕಾರವನ್ನು ಹೊಂದಿದವರು ತಮ್ಮ ಕಷ್ಟಗಳಿಂದ, ಸಮಸ್ಯೆಗಳಿಂದ, ಶಾಶ್ವತವಾಗಿ ಹೊರಬರುತ್ತಾರೆಂದು ಅಂದರೆ ಮುಕ್ತಿಯನ್ನು ಹೊಂದುತ್ತಾರೆಂದು ತಿಳಿದುಕೊಳ್ಳಬೇಕು. ಎಲ್ಲರಿಗೂ ಮುಕ್ತಿಯನ್ನು ಹೊಂದಬೇಕೆಂದು ಅಂದರೆ ಆತ್ಮ ಸಾಕ್ಷಾತ್ಕಾರವನ್ನು ಹೊಂದ ಬೇಕೆಂದು ಇರುತ್ತದೆ. ಆದರೆ ಅದು ಅಷ್ಟು ಸುಲಭವಾದ್ದಲ್ಲ. ಅದಕ್ಕೆ ಕೆಲವು ನಿಯಮಗಳನ್ನು ಪಾಲಿಸಬೇಕು, ಸ್ವಲ್ಪ ಯೋಗ್ಯತೆಯ ಅವಶ್ಯಕತೆ ಇದೆ. ಆ ಯೋಗ್ಯತೆ ಹೇಗೆ ಬರುವುದು? ಆ ನಿಯಮಗಳಾದರೂ ಏನು? ಎನ್ನುವುದು ಬಾಬಾರವರೇ ಸ್ವಯಂ ತಿಳಿಯಪಡಿಸಿದರು. ಶ್ರೀ ಸಾಯಿ ಸಚ್ಚರಿತ್ರೆಯಲ್ಲಿ 16,17ನೇ ಅಧ್ಯಾಯಗಳಲ್ಲಿ (128–131ಪುಟಗಳು) ಬಾಬಾರವರ ಸಂದೇಶ ನೋಡೋಣ.

## ಬ್ರಹ್ಮಜ್ಞಾನ ಅಥವಾ ಆತ್ಮಸಾಕ್ಷಾತ್ಕಾರ ಯೋಗ್ಯತೆ

**(1) ಮುಮುಕ್ಷತೆ ಅಥವ ಸ್ವೇಚ್ಛೆ (ಮುಕ್ತಿ) ಪಡೆಯಲು ತೀವ್ರವಾದ ಬಯಕೆ:–**

**"ಯಾರು ತಾನು ಬದ್ದನೆಂದು (ಬಂಧನದಲ್ಲಿ ಇದ್ದೇನೆಂದು) ಗ್ರಹಿಸಿ ಬಂಧನಗಳಿಂದ ಹೊರ ಬರಲು ಕೃತ ನಿಶ್ಚಯನಾಗಿ (ತೀವ್ರವಾಗಿ ನಿರ್ಣಯಿಸಿಕೊಂಡಿರುವನಾಗಿ) ಶ್ರಮಪಟ್ಟು (ತುಂಬಾ ಕಷ್ಟಪಟ್ಟು) ಇತರ ಸುಖಗಳನ್ನು ಲಕ್ಷಿಸದೆ ಅದನ್ನು (ಆತ್ಮಸಾಕ್ಷಾತ್ಕಾರವನ್ನು) ಹೊಂದಲು ಪ್ರಯತ್ನಿಸುವರೋ ಅವರು ಆಧ್ಯಾತ್ಮಿಕ ಜೀವನಕ್ಕೆ ಅರ್ಹರು".**

**ವಿವರಣೆ:–** ಇಲ್ಲಿ ಇತರ ಸುಖಗಳು ಅಂದರೆ ಪ್ರಾಪಂಚಿಕ ಸುಖಗಳು ಎಂದು ಅರ್ಥ. ಅವುಗಳನ್ನು ತಾತ್ಕಾಲಿಕ ಸುಖಗಳು ಎಂದು ಕೂಡ ಎನ್ನುತ್ತೇವೆ. ಆದರೆ ಭೌತಿಕ ದೇಹದಿಂದ ಅನುಭವಿಸುವ ಸುಖಗಳೇ ಅಂದರೆ ತಿಂಡಿ, ವಸ್ತು, ಮನೆ, ಮುಂತಾದದ್ದು ಅವು ಏನೇ ಇದ್ದರೂ ಅವುಗಳು ಮಿತಿಯಲ್ಲಿ ಇರಬೇಕು. ಅವುಗಳನ್ನು ಇನ್ನೂ ಇನ್ನೂ ಬೇಕೆಂದು ಆಶಿಸಬಾರದು. ಅವುಗಳಿಗಾಗಿ ತಪ್ಪುಗಳು, ಪಾಪಗಳು ಮಾಡಬಾರದು. ಅಧರ್ಮವಾಗಿ ವರ್ತಿಸಬಾರದು. ಆದರೆ ಆತ್ಮಸುಖ ವಿನಹ ಇತರೆ ಸುಖಗಳಿಗೆ ಪ್ರಾಮುಖ್ಯತೆ ಕೊಡಕೂಡದೆಂದು ಬಾಬಾರವರ ಸಂದೇಶ.

**(2)ವಿರಕ್ತಿ ಅಥವಾ ಇಹ–ಪರ ಸೌಖ್ಯಗಳಲ್ಲಿ ಬೇಸರಿಕೆ ಹೊಂದುವುದು :–**

**"ಇಹ–ಪರ ಲೋಕಗಳಲ್ಲಿರುವ ಗೌರವಗಳಿಗೆ ವಿಷಯಗಳಿಗೆ ಬೇಸರ ಹೊಂದದ**

**ವಿನಹ ಪೌರಮಾರ್ಥಿಕ (ಮೋಕ್ಷ ಮಾರ್ಗವಿಶ್ಲೇಷಣೆ) ರಂಗದಲ್ಲಿ ಪ್ರವೇಶಿಸಲು ಅರ್ಹತೆ ಇಲ್ಲ"**

ವಿವರಣೆ :– ಬಾಬಾರವರು ಹೇಳಿರುವ ಈ ವಾಕ್ಯದಿಂದ ನಾವು ತುಂಬಾ ಸಂದೇಶ ಪಡೆಯಬಹುದು. ಆ ವಾಕ್ಯದಲ್ಲಿ ತುಂಬಾ ಅರ್ಥವಿದೆ. ಬಾಬಾ ಏನು ಮಾತನಾಡಿದರೂ ಯಾವ ಸಂದೇಶವನ್ನು ನೀಡಿದರೂ ಅದು ಸುಮ್ಮನೆ ಓದಿ ಬಿಡುವುದಲ್ಲ. ಅದರಲ್ಲಿರುವ ಅರ್ಥವನ್ನು ಅಂತರಾರ್ಥವನ್ನು ತಿಳಿದುಕೊಳ್ಳುವ ಪ್ರಯತ್ನ ಮಾಡಬೇಕು. ಹಾಗೆ ಮಾಡಬೇಕಾದರೆ ಅದೇ ಸಂದೇಶವನ್ನು ಪುನಃ ಪುನಃ ಓದಬೇಕು. ಪ್ರತಿಯೊಂದು ಪದದ ಅರ್ಥವನ್ನು ಗ್ರಹಿಸಲು ಪ್ರಯತ್ನಿಸಬೇಕು.

ಇಲ್ಲಿ ಇಹ–ಪರ ಲೋಕ ಎಂದು ಹೇಳಿದ್ದಾರೆ. ಮೊದಲು ಇದನ್ನು ಕುರಿತು ತಿಳಿದುಕೊಳ್ಳೋಣ ಈ ಸೃಷ್ಟಿಯಲ್ಲಿ ಇಹ ಲೋಕವು, ಪರಲೋಕವು, ಎಂದು ಎರಡು ಬಗೆಯ ಲೋಕಗಳಿವೆ. ಇಹ ಲೋಕವು ಅಂದರೆ ನಮ್ಮ ಕಣ್ಣಿಗೆ ಕಾಣುವ ಲೋಕಗಳು, ಪರಲೋಕ ಅಂದರೆ ಕಣ್ಣಿಗೆ ಕಾಣದ ಲೋಕಗಳು. ನಮ್ಮೆಲ್ಲರಿಗೂ ಇಹ ಲೋಕದ ಕುರಿತು ಗೊತ್ತಿದೆ. ಆದರೆ ಪರಲೋಕದ ಕುರಿತು ನಮಗೆ ಗೊತ್ತಿಲ್ಲ.

"ಇಹ–ಪರ ಲೋಕಗಳಲ್ಲಿರುವ ಗೌರವಕ್ಕೆ ವಿಷಯಗಳಿಗೆ ಬೇಸರ ಆಗದ ವಿನಹ" ಎಂದು ಬಾಬಾ ಎಂದಿದ್ದಾರೆ. ಆದರೆ ಮುಖ್ಯವಾಗಿ ಎರಡು ಜೀವನಗಳಿವೆ ಎಂದು ತಿಳಿದುಕೊಳ್ಳಬೇಕು.

ಒಂದು ನಮಗೆ ಕಾಣಿಸುತ್ತಿರುವ ಈ ದೇಹದಿಂದ ಅನುಭವಿಸುತ್ತಿರುವ ಇಹಲೋಕದ ಜೀವನ. ಅದೇ ರೀತಿ ನಾವು ಈ ಶರೀರ ಬಿಟ್ಟ ನಂತರ ಅಂದರೆ ಮರಣಿಸಿದ ನಂತರ ನಾವು ಪಡೆಯಲಿರುವ ಕಾಣದ ಪರಲೋಕ ಜೀವನ.

ಈ ವಿಷಯವನ್ನು ಅಂದರೆ ಪ್ರತಿಯೊಬ್ಬರಿಗೂ ಜನ್ಮಗಳಿವೆ ಎಂದು ಬಾಬಾ ಅನೇಕ ಸಂದರ್ಭಗಳಲ್ಲಿ ಹೇಳಿದ್ದಾರೆ.

(1) (36ನೇಯ ಅಧ್ಯಾಯ 274ನೇ ಪುಟದಲ್ಲಿ ಬಾಬಾ ಶ್ಯಾಮರವರ ಕೆನ್ನೆಯನ್ನು ಜಿಗುಟುವುದು)

ಒಂದು ದಿನ ಶ್ಯಾಮ ಮಧ್ಯಾಹ್ನ ಭೋಜನದ ನಂತರ ಬಾಬಾರ ಕೈಗಳನ್ನು ಕರವಸ್ತ್ರದಿಂದ ಒರೆಸುತ್ತಿರುವಾಗ ಬಾಬಾ ಶ್ಯಾಮರವರ ಕೆನ್ನೆಯನ್ನು ಜಿಗುಟಿದರು. ಶ್ಯಾಮ ಕೋಪಿಸಿಕೊಂಡು "ದೇವಾ! ನನ್ನ ಕೆನ್ನೆಯನ್ನು ಜಿಗುಟುವುದು ನಿಮಗೆ ಸರಿಯೇ? ನಮ್ಮ ಕೆನ್ನೆಗಳನ್ನು ಜಿಗುಟುವ ತುಂಟ ದೇವನು ನಮಗೆ ಬೇಕಾಗಿಲ್ಲ. ನಾವೇನಾದರೂ ನಿಮ್ಮ ಮೇಲೆ ಆಧಾರಪಟ್ಟು ಇದ್ದೇವೆಯೇ? ಇದೇನಾ ತಮ್ಮ ಸಾನಿಧ್ಯದ ಫಲ? ಎಂದು ಅಂದರು.

ಆಗ ಬಾಬಾ ಹೀಗೆ ಅಂದರು "ಶ್ಯಾಮಾ! 72ಜನ್ಮಗಳಿಂದ ನೀನು ನನ್ನ ಜೊತೆ ಇದ್ದರೂ ನಾನು ಎಂದಿಗೂ ನಿನ್ನ ಜಿಗುಟಲಿಲ್ಲ. ಇಷ್ಟು ದಿನದ ನಂತರ ಜಿಗುಟಿದ್ದಕ್ಕೆ ಕೋಪ ಬರುತ್ತದೆ".

ಬಾಬಾ ಮಾತುಗಳಿಂದ ಎಲ್ಲರಿಗೂ ಜನ್ಮಗಳಿವೆ ಎಂದು ನಾವು ಸ್ಪಷ್ಟವಾಗಿ ಅರ್ಥಮಾಡಿಕೊಳ್ಳಬಹುದು. ಅಷ್ಟೇ ಅಲ್ಲ ನಮಗೇ ಅಲ್ಲ ನಾವು ದೇವರುಗಳೆಂದು ತಿಳಿದಿರುವವರಿಗೆ ಕೂಡಾ ಜನ್ಮಗಳಿವೆ ಎಂದು ಅವರು ಇದಕ್ಕೂ ಮುಂಚೆ ಕೂಡಾ ಅನೇಕ

ಜನ್ಮಗಳನ್ನು ಎತ್ತಿದ್ದಾರೆಂದು ಇದರಿಂದ ನಾವು ಸ್ಪಷ್ಟವಾಗಿ ತಿಳಿದುಕೊಳ್ಳಬಹುದು. ಅನೇಕ ಜನರಿಗೆ ಅವರು ಅವತಾರ ಪುರುಷರೆಂದು ಲೋಕ ಕಲ್ಯಾಣಕ್ಕಾಗಿ ಅವತರಿಸಿದರೆಂದು ಭಾವಿಸುತ್ತಾ ಇರುತ್ತಾರೆ. ಆದರೆ ಬಾಬಾ ಮಾತುಗಳಿಂದ ಬಾಬಾ ಕೂಡ ಇದಕ್ಕೂ ಮುಂಚೆ ಅನೇಕ ಜನ್ಮಗಳನ್ನು ಎತ್ತಿದ್ದಾರೆಂದು ತಿಳಿದುಕೊಳ್ಳಬಹುದು. ಈ ವಿಷಯವೇ ಭಗವದ್ಗೀತೆಯಲ್ಲಿ ಶ್ರೀ ಕೃಷ್ಣ ಭಗವಾನರು ಕೂಡ ಹೇಳಿದ್ದಾರೆ.

**ಶ್ಲೋ॥ ಬಹುನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ।**
**ತಾ ನ್ಯಹಂ ವೇದ ಸರ್ವಾಣಿ ನತ್ವಂ ವೇತ್ಥಪರನ್ತಪ ॥** (ಭ,ಗೀ,4-5)

**ಭಾವಾರ್ಥ :-** ಓ ಅರ್ಜುನಾ! ನಿನಗೂ ನನಗೂ ಇದುವರೆಗೂ ಅನೇಕ ಜನ್ಮಗಳು ಕಳೆದಿವೆ. ಆದರೆ ಅವೆಲ್ಲವೂ ನನಗೆ ಗೊತ್ತಿದೆ. ಆದರೆ ನಿನಗೆ ಗೊತ್ತಿಲ್ಲ.

(2) (46ನೇಯ ಅಧ್ಯಾಯ 335ನೇ ಪುಟದಲ್ಲಿ ಎರಡು ಮೇಕೆಗಳ ಕಥೆ)

ಒಂದು ದಿನ ಬಾಬಾ ಜಿಂಕೆ ವನನಿಂದ ಮರಳಿ ಬರುತ್ತಾ ಮಾರ್ಗ ಮಧ್ಯದಲ್ಲಿ ಮೇಕೆಗಳ ಗುಂಪನ್ನು ನೋಡಿದರು ಅದರಲ್ಲಿರುವ ಎರಡು ಮೇಕೆಗಳ ಮೇಲೆ ಬಾಬಾ ದೃಷ್ಟಿ ಬಿತ್ತು. ತಕ್ಷಣ ಅವರು ಆ ಎರಡು ಮೇಕೆಗಳನ್ನು ರೂ.32ಗಳಿಗೆ ಕೊಂಡರು. ಆದರೆ ಅವುಗಳ ಬೆಲೆ ರೂ.8ಗಳಿಗೆ ಮೀರಿ ಇರುವುದಿಲ್ಲ. ಅದು ನೋಡಿ ಭಕ್ತರು ಆಶ್ಚರ್ಯಪಟ್ಟರು. ಬಾಬಾರವರನ್ನು ನಿಂದಿಸಿದರು. ಬಾಬಾ ಏನೂ ಉತ್ತರಿಸದೇ ಸುಮ್ಮನೆ ಇದ್ದರು. ಅನಂತರ



ಬಾಬಾ ನಾಲಕ್ಕು ಸೇರು ಕಡಲೆ ಬೇಳೆಯನ್ನು ಕೊಂಡು ಆ ಮೇಕೆಗಳಿಗೆ ತಿನಿಸಿ ಎಂದು ಹೇಳಿ ನಂತರ ಆ ಮೇಕೆಗಳನ್ನು ಯಜಮಾನನಿಗೆ ವಾಪಸ್ ಕೊಟ್ಟುಬಿಟ್ಟರು.

ಆಗ ಶ್ಯಾಮಾ, ಬಾಬಾರವರನ್ನು ಏತಕ್ಕಾಗಿ ಹೀಗೆ ಮಾಡಿದ್ದಾರೆಂದು ಉತ್ತರವನ್ನು ಬಯಸಿದಾಗ ಬಾಬಾ ಈ ವಿಧವಾಗಿ ಹೇಳಿದರು.

"ಓ ಶ್ಯಾಮಾ! ತಾತ್ಯಾ! ನೀವು ಈ ವ್ಯಾಪಾರದಲ್ಲಿ ನಾನು ಮೋಸ ಹೋಗಿದ್ದೇನೆಂದು ಎಂದುಕೊಳ್ಳುತ್ತಿರುವಿರಿ, ಹಾಗಲ್ಲ ಅದರ ಕಥೆ ಕೇಳಿ ಗತ ಜನ್ಮದಲ್ಲಿ ಅವರು ಮಾನವರು ಅವರ ಅದೃಷ್ಟದಿಂದ ನನ್ನ ಜೊತೆಗಾರರಾಗಿ ಇರುತ್ತಿದ್ದರು. (ನನ್ನ ಜೊತೆ ಇರುತ್ತಿದ್ದರು). ಅವರು ಒಂದೇ ತಾಯಿಯ ಮಕ್ಕಳಾಗಿದ್ದರು. ಪ್ರಾರಂಭದಲ್ಲಿ ಅವರಿಗೆ ಒಬ್ಬರೆಂದರೇ ಇನ್ನೊಬ್ಬರಿಗೆ ಪ್ರೀತಿ ಇತ್ತು. ಬರುತ್ತಾ, ಬರುತ್ತಾ ಶತ್ರುಗಳಾದರು. ದೊಡ್ಡವನು ಸೋಂಬೇರಿ. ಚಿಕ್ಕವನು ತುಂಬಾ ಚುರುಕು. ಅವನು ತುಂಬಾ ಹಣವನ್ನು ಸಂಪಾದಿಸಿದನು. ದೊಡ್ಡವನು ಅಸೂಯೆಗೆ ಒಳಗಾಗಿ ಚಿಕ್ಕವನನ್ನು ಕೊಂದು ಅವನ ಹಣವನ್ನು ಅಪಹರಿಸಬೇಕೆಂದು ಕೊಂಡನು. ಮಾತೃ ಪ್ರೀತಿಯನ್ನು ಮರೆತು ಅವರಿಬ್ಬರು ಜಗಳವಾಡಿದರು. ಅಣ್ಣ ತಮ್ಮನನ್ನು ಕೊಲ್ಲಲು ಅನೇಕ ಬಾರಿ ಹೊಂಚು ಹಾಕಿದನು. ಆದರೆ ಅವೆಲ್ಲಾ ಪ್ರಯೋಜನಕಾರಿ ಆಗಲಿಲ್ಲ. ಇಬ್ಬರೂ ಬದ್ಧ ಶತ್ರುಗಳಾದರು.

ಅಣ್ಣ ಒಂದು ದಿನ ತನ್ನ ಸೋದರನನ್ನು ದೊಣ್ಣೆಯಿಂದ ಹೊಡೆದನು. ಚಿಕ್ಕವನು ಅಣ್ಣನನ್ನು ಕೊಡಲಿಯಿಂದ ಕತ್ತರಿಸಿದನು. ಇಬ್ಬರೂ ಅದೇ ಸ್ಥಳದಲ್ಲಿ ಸತ್ತು ಬಿದ್ದರು. ಅವರಿಬ್ಬರು ತಮ್ಮ ಕರ್ಮಫಲಗಳಿಂದಲೇ ಮೇಕೆಗಳಾಗಿ ಹುಟ್ಟಿದ್ದಾರೆ. ನನ್ನ ಪಕ್ಕದಿಂದ ಹೋಗುತ್ತಿರುವಾಗ ಅವರನ್ನು ಗುರ್ತುಹಿಡಿದಿದ್ದೇನೆ. ಅವರ ಪೂರ್ವ ವೃತ್ತಾಂತವನ್ನು ನೆನಪಿಗೆ ತಂದುಕೊಂಡಿದ್ದೇನೆ. ಅವರನ್ನು ಅನುಕರಿಸಿ ಅವರಿಗೆ ತಿಂಡಿಕೊಟ್ಟು ಸ್ವಲ್ಪ ವಿಶ್ರಾಂತಿಯನ್ನು ಕಲ್ಪಿಸಿ ಸಾಂತ್ವನವನ್ನು ಪರೀಕ್ಷಿಸಬೇಕೆಂದುಕೊಂಡಿದ್ದೆ. ಆದ್ದರಿಂದ ಇಷ್ಟು ಹಣವನ್ನು ಖರ್ಚು ಮಾಡಿದೆ. ಅದಕ್ಕಾಗಿ ನೀವು ನನ್ನನ್ನು ದೂಷಿಸುತ್ತಿರುವಿರಾ? ನನ್ನ ವ್ಯಾಪಾರ ನಿಮಗೆ ಇಷ್ಟವಾಗದೆ ಇರುವುದರಿಂದ ನಾನು ಅವುಗಳ ಯಜಮಾನಿ ಹತ್ತಿರಕ್ಕೆ ಮರಳಿ ಕಳುಹಿಸಿಕೊಟ್ಟೆ.

ಬಾಬಾ ಮೇಲೆ ಹೇಳಿರುವ ವಿಷಯಗಳಿಂದ ಪ್ರತಿ ಒಬ್ಬರಿಗೂ ಜನ್ಮಗಳಿವೆ ಎಂದು ತಿಳಿಯುತ್ತದೆ. ನಮಗೆ ಸಹ ಧ್ಯಾನ ಮಾಡಿ ಉತ್ತಮ ಸ್ಥಿತಿಗೆ ಹೋಗದಿದ್ದರೆ ಇನ್ನೂ ಜನ್ಮಗಳು ಇರುತ್ತವೆ ಎಂದು ಸ್ಪಷ್ಟವಾಗಿ ತಿಳಿದುಕೊಳ್ಳಬಹುದು. ಹಾಗೆಯೇ ಯಾವ ಜನ್ಮಗಳಾದರೂ ನಾವು ಮಾಡುವ ಕರ್ಮಗಳ ಪ್ರಕಾರ ಇರುತ್ತದೆ ಎಂದು ತಿಳಿದುಕೊಳ್ಳಬೇಕು. ಸದ್ಯಕ್ಕೆ ನಾವು ಎಂತಹ ಧನವಂತರಾದರೂ! ಎಷ್ಟು ದೊಡ್ಡವರಾದರೂ! ಹಿಗ್ಗಬಾರದು. ನಾವು ಮಾಡುವ ಕರ್ಮಗಳು ಸರಿಯಾಗಿ ಇಲ್ಲದಿದ್ದರೆ ಮರಳಿ ನಾವು ಪ್ರಾಣಿ ಜನ್ಮವೋ! ಅಥವಾ ಇನ್ನೂ ಹೀನವಾದ, ನೀಚವಾದ, ಜನ್ಮವನ್ನು ಹೊಂದಬೇಕಾಗಿ ಬರುತ್ತದೆ ಎಂದು ತಿಳಿದುಕೊಳ್ಳಬೇಕು. ನಾವು ಕರ್ಮಗಳನ್ನು ತುಂಬಾ ಹುಷಾರಾಗಿ ಮಾಡಬೇಕು. ನಮಗೆ ನಷ್ಟ ಉಂಟಾಗುವ ಕರ್ಮಗಳನ್ನು ಮಾಡಬಾರದು. ಏಕೆಂದರೆ ಗತ ಜನ್ಮದಲ್ಲಿ ಬಾಬಾರವರ ಜೊತೆ ಸಹಜೀವನ ಮಾಡಿದರೂ ಸಹ ತಾವು ಮಾಡಿದ ತಪ್ಪು ಕರ್ಮಗಳಿಂದ ಮಾನವ ಜನ್ಮದಿಂದ ಪ್ರಾಣಿ ಜನ್ಮಕ್ಕೆ ಇಳಿಜಾರಿದರಲ್ಲವೇ! ಪ್ರಸ್ತುತ ಸಮಯದಲ್ಲಿ ನಾವು ನಮಗೆ ಇಷ್ಟ ಬಂದಂತೆ ಪ್ರವರ್ತಿಸಿದರೆ ನಾವು ಕೂಡ ಅಂತಹ ಜನ್ಮಗಳನ್ನೇ ಹೊಂದಬೇಕಾಗಿ ಬರುತ್ತದೆ ಎಂದು ಈ ವಿಧವಾಗಿ ಬಾಬಾ ಅವರು ಸಂದೇಶ ನೀಡಿದರು. ಆದ್ದರಿಂದ ನಮ್ಮ ಇಷ್ಟ ಬಂದಂತೆ ಪ್ರವರ್ತಿಸಿ ಕರ್ಮಗಳನ್ನು ಮಾಡಿ ಬಾಬಾರವರನ್ನು ಪ್ರಾರ್ಥಿಸುತ್ತಿದ್ದೇವೆಂದು, ಆರಾಧಿಸುತ್ತಿದ್ದೇವೆಂದು, ಭಾವಿಸಿದರೆ ನಷ್ಟಗಳ ಪಾಲಾಗುವುದು ನಾವೇ.

(3)ಹಾಗೆಯೇ ಬಾಬಾ ಭಕ್ತರಾದ ಭಾಗೋಜಿ ಗತ ಜನ್ಮವನ್ನು ಕುರಿತು 7ನೇಯ ಅಧ್ಯಾಯ. 65ನೇ ಪುಟದಲ್ಲಿ ಈ ರೀತಿ ಹೇಳಿದ್ದಾರೆ. ಭಾಗೋಜಿ ಗತ ಜನ್ಮಗಳಲ್ಲಿ ಮಾಡಿದ ಪಾಪದ ಫಲವಾಗಿ ಈ ಜನ್ಮದಲ್ಲಿ ಕುಷ್ಟರೋಗದಿಂದ ನರಳುತ್ತಿದ್ದರು. ಅವನ ಬೆರಳುಗಳು ನೇರವಾಗಿ ನಿಂತಿತ್ತು. ಅವನ ಶರೀರವೆಲ್ಲಾ ಕೀವುಸೋರುತ್ತಾ ದುರ್ವಾಸನೆ ಬರುತ್ತಿತ್ತು.

ಇದರಿಂದ ಗತಜನ್ಮಗಳಲ್ಲಿ ಮಾಡಿದ ಕರ್ಮಗಳು ಈ ಜನ್ಮದಲ್ಲಿ ಅನುಭವಿಸಬೇಕಾಗುತ್ತದೆ ಎಂದು ಅವು ಎಷ್ಟು ಕಷ್ಟಕರವಾಗಿ, ದುಃಖಕರವಾಗಿರುತ್ತವೆಯೋ ಎಂದು ಆ ಕಥೆಗಳ ಮೂಲಕ ಬಾಬಾ ಸಂದೇಶಗಳಿಂದ ನಾವು ತಿಳಿದುಕೊಳ್ಳಬಹುದು. ಆದ್ದರಿಂದ ಈಗ ನಾವು ಮಾಡುವ ಕರ್ಮಗಳು ಈ ಜನ್ಮದಲ್ಲಿ ಅಲ್ಲದಿದ್ದರೂ ಭವಿಷ್ಯತ್ ಜನ್ಮಗಳಲ್ಲಾದರೂ ನಾವು ಅನುಭವಿಸಬೇಕಾಗುತ್ತದೆ.

(4)ಅಷ್ಟೇ ಅಲ್ಲ ಮಾಡಿರುವ ಕರ್ಮಗಳು, ಕಷ್ಟಗಳು ಭರಿಸ (ತಡೆಯ, ಅನುಭವಿಸ) ಲಾರದೇ ಆತ್ಮಹತ್ಯೆಗಳನ್ನು ಮಾಡಿಕೊಳ್ಳಬೇಕೆಂದರೂ ಲಾಭವಿಲ್ಲ. ಅವರ ಪರಿಸ್ಥಿತಿ ಇನ್ನೂ ದುರ್ಲಭವಾಗಿರುತ್ತದೆ. ಈ ವಿಷಯವನ್ನು 26ನೇ ಅಧ್ಯಾಯದಲ್ಲಿ 197ನೇಯ ಪುಟದಲ್ಲಿ ಅಕ್ಕಲ್ ಕೋಟ್‌ಕರ್ ಮಹಾರಾಜರವರ ಕಾಲದಲ್ಲಿ ನಡೆದ ಒಂದು ಕಥೆಯ ಮೂಲಕ ತಿಳಿದುಕೊಳ್ಳಬಹುದು.

ಒಬ್ಬ ಭಕ್ತನು ವಾಸಿ ಆಗದ ದೀರ್ಘರೋಗದಿಂದ ನರಳುತ್ತಿದ್ದನು. ನೋವನ್ನು ಸಹಿಸಲಾರದೇ ನಿರಾಸೆ ಪಟ್ಟು ಬಾವಿಯಲ್ಲಿ ಧುಮುಕಿದನು. ತಕ್ಷಣ ಮಹಾರಾಜ ಬಂದು ಅವನನ್ನು ಬಾವಿಯಿಂದ ಹೊರಗೆ ತೆಗೆದು ಹೀಗೆ ಹೇಳಿದರು. "ಗತಜನ್ಮದ ಪಾಪ ಪುಣ್ಯಗಳನ್ನು ನೀನು ಅನುಭವಿಸುವುದು ತಪ್ಪುವುದಿಲ್ಲ. ಕರ್ಮಾನುಭವ ಪೂರ್ತಿ ಆಗದಿದ್ದರೆ ಪ್ರಾಣತ್ಯಾಗ ನಿನಗೆ ಉಪಯೋಗವಾಗುವುದಿಲ್ಲ. ನೀನು ಇನ್ನೂ ಒಂದು ಜನ್ಮತಾಳಿ ಪುನಃ ಆ ನೋವನ್ನು ಅನುಭವಿಸಬೇಕಾಗುತ್ತದೆ. ಸಾಯುವುದಕ್ಕಿಂತ ಮುಂಚೆ ಇನ್ನೂಕೆಲವು ದಿನಗಳಾದರೂ ನಿನ್ನ ಕರ್ಮವನ್ನು ಯಾಕೆ ಅನುಭವಿಸಬಾರದು? ಗತ ಜನ್ಮಗಳ ಪಾಪಗಳನ್ನು ಏಕೆ ಮುಗಿಸಿಬಿಡಬಾರದು? ಆದ್ದರಿಂದ ಆ ಪಾಪಕರ್ಮಗಳನ್ನು ಶಾಶ್ವತವಾಗಿ ಹೋಗುವ ಹಾಗೆ ಮಾಡಿಕೊ".(ಹೋಗಲಾಡಿಸಿಕೊ)

ಆದ್ದರಿಂದ ಯಾರಾದರೂ ಸರಿಯೇ ಕರ್ಮಗಳ ಫಲವನ್ನು ಅನುಭವಿಸಬೇಕಾದ್ದೇ. ನಾವು ಮಾಡುವ ಪೂಜೆಗಳು, ಭಜನೆಗಳು, ಆರಾಧನೆಗಳು, ನಮ್ಮ ಕರ್ಮಗಳಿಂದ ನಮ್ಮನ್ನು ರಕ್ಷಿಸಲಾರವೆಂದು ತಿಳಿದುಕೊಳ್ಳಬೇಕು.

ಆದ್ದರಿಂದ ನಿಮ್ಮಿಂದ ಯಾರಿಗಾದರೂ, ಯಾವ ಪ್ರಾಣಿಗಾದರೂ, ಕಷ್ಟ–ನಷ್ಟ ಉಂಟಾಗದಂತೆ ಜಾಗ್ರತೆ ವಹಿಸಬೇಕು. ಇಲ್ಲದಿದ್ದರೇ ಆ ಕರ್ಮಗಳ ಫಲ ಭವಿಷತ್ತಿನಲ್ಲಿ ತಪ್ಪದೇ ನಾವು

ಅನುಭವಿಸಬೇಕಾಗುತ್ತದೆ, ಬಾಧೆ ಪಡಬೇಕಾಗಿ ಬರುತ್ತದೆ. ರೋಗಗಳ ಪಾಲಾಗಬೇಕಾಗುತ್ತದೆ. ಪ್ರಸ್ತುತದಲ್ಲಿ ಎಲ್ಲರೂ ಅನುಭವಿಸುತ್ತಿರುವ ರೋಗಗಳಿಗೆ ಕಾರಣ ಗತಕಾಲದಲ್ಲಿ ಅವರು ಮಾಡಿಕೊಂಡ ಪಾಪಕರ್ಮಗಳ ಫಲಿತವೆ. ಅದಕ್ಕೆ ಶಾಸ್ತ್ರಗಳಲ್ಲಿ "ಪೂರ್ವ ಜನ್ಮಕೃತಂ ಪಾಪಂ ವ್ಯಾಧಿ ರೂಪೇಣ ಪೀಡ್ಯತೇ" ಎಂದು ಹೇಳಲಾಗಿದೆ.

ಬಾಬಾ ಅವರು "ಇನ್ನೂ ಇಹ–ಪರ ಲೋಕಗಳಲ್ಲಿ ಇರುವ ಗೌರವ ವಿಷಯಗಳಿಗೆ ಬೇಸರ ಹೊಂದದ ವಿನಹ" ಎಂದರು.

ಇಹಲೋಕದಲ್ಲಿ ಪ್ರತಿ ಒಬ್ಬರೂ ಹಣವಿದ್ದರೇನೆ ಗೌರವ ಎಂದು ಭಾವಿಸುತ್ತಾರೆ. ಹಣ ಹೆಚ್ಚಿಸಿಕೊಳ್ಳಲು, ಸಂಪಾದಿಸಿಕೊಳ್ಳಲು ಆರಾಟ ಪಡುತ್ತಿರುತ್ತಾರೆ. ತುಂಬಾ ಕಷ್ಟ ಪಡುತ್ತಿರುತ್ತಾರೆ. ಹಣಕ್ಕಾಗಿ ಮಾಡಬಾರದ ಕೆಲಸಗಳನ್ನು ಮಾಡುತ್ತಾ ಇರುತ್ತಾರೆ. ಧರ್ಮವನ್ನು ತಪ್ಪುತ್ತಾರೆ. ಇದಕ್ಕೆ ಕಾರಣ ಹಣವಿದ್ದರೇನೇ ಗೌರವ ಎಂದು ಭಾವಿಸುವುದು. ಅಷ್ಟೇ ಅಲ್ಲ ಪದವಿ ಇದ್ದರೇ ಗೌರವ, ದೊಡ್ಡ ಉದ್ಯೋಗವಿದ್ದರೇನೇ ಗೌರವ. ಯಾವ ರಂಗದಲ್ಲಿ ಮಾನ್ಯತೆ (ಪ್ರಾಮುಖ್ಯತೆ) ತಂದುಕೊಂಡರು ಗೌರವ ಎಂದುಕೊಳ್ಳುತ್ತಾರೆ. ಅದಕ್ಕಾಗಿ ತಾಪತ್ರಯ ಪಡುತ್ತಿರುತ್ತಾರೆ. ಆದರೆ ಬಾಬಾ ಇವುಗಳ ಬಗ್ಗೆ ಬೇಸರ ಅಂದರೆ ವಿರಕ್ತಿ ಹೊಂದಬೇಕೆಂದರು.

ಹಾಗೆಯೇ ಇಹಲೋಕದ ವಿಷಯಗಳು ಅಂದರೆ ಸುಖಗಳನ್ನು ನೀಡುವುದು ಅಂದರೆ ಸಂಸಾರ, ಹೆಂಡತಿ, ಮಕ್ಕಳು, ಬಂಗಲೆ, ಕಾರುಗಳು, ಚಿನ್ನ, ಬೆಲೆಬಾಳುವ ವಸ್ತುಗಳು, ಮುಂತಾದವುಗಳ ಬಗ್ಗೆ ಬೇಸರಿಕೆ ಪಡೆಯಬೇಕೆಂದು ಬಾಬಾ ಹೇಳಿದರು. ಅಂದರೆ ವಿರಕ್ತಿ ಪಡೆಯಬೇಕೆಂದರು. ಅಂದರೆ ವೈರಾಗ್ಯವನ್ನು ಹೊಂದಬೇಕೆಂದರು. ಹಾಗೆ ಹೋದರೆ ವಿನಹ ಆತ್ಮಜ್ಞಾನ ಹೊಂದಲು ಅರ್ಹರು ಆಗಲಾರರೆಂದರು. ಇದರ ಪ್ರಕಾರ ನೋಡಿದರೆ ಬಾಬಾ ಹೇಳಿದ ವಾಕ್ಯವನ್ನು ಎಷ್ಟು ಅರ್ಥಮಾಡಿಕೊಳ್ಳಬಹುದೋ ನಮಗೆ ಗೊತ್ತಾಗುತ್ತದೆ.

**(3) ಅಂತರ್ಮುಖತೆ (ಒಳನೋಟ) :–**

"ನಮ್ಮ ಇಂದ್ರಿಯಗಳನ್ನು ಬಾಹ್ಯ ಪ್ರಪಂಚವನ್ನು ನೋಡಲಿಕ್ಕಾಗಿಯೇ ಭಗವಂತನು ಸೃಷ್ಟಿಸಿದ್ದಾನೆ. ಆದ್ದರಿಂದ ಮನುಷ್ಯನು ಎಂದಿಗೂ ಹೊರಗಿರುವವರನ್ನೇ ನೋಡುವನು. ಆದರೆ ಆತ್ಮಸಾಕ್ಷಾತ್ಕಾರ ಅಥವಾ ಮೋಕ್ಷವನ್ನು ಬಯಸುವವನು ತನ್ನ ದೃಷ್ಟಿಯನ್ನು ಒಳಮುಖ ಮಾಡಿ ಒಳಗಿರುವ ಆತ್ಮನನ್ನು ಏಕ ಧ್ಯಾನದಿಂದ ನೋಡಬೇಕು".

**ವಿವರಣೆ :–** ಇಲ್ಲಿ ಬಾಬಾ ತುಂಬಾ ಸ್ಪಷ್ಟವಾಗಿ ಮೋಕ್ಷವನ್ನು ಹೊಂದಬೇಕಾದರೆ

ಆತ್ಮಸಾಕ್ಷಾತ್ಕಾರವನ್ನು ಪಡೆಯಬೇಕೆಂದು ಅದಕ್ಕೆ ಧ್ಯಾನವೇ ಸರಿಯಾದ ಮಾರ್ಗವೆಂದು ಧ್ಯಾನದ ಮೂಲಕ ನಮ್ಮಲ್ಲಿರುವ ಆತ್ಮದ ಮೇಲೆ ದೃಷ್ಟಿಯಿಡಬಲ್ಲೆವೆಂದು ಅದಕ್ಕೆ ಅಂತರ್ಮುಖರಾಗಬೇಕೆಂದು ಹೇಳಲಾಗಿದೆ. ಭಗವಂತ ಸರ್ವಾಂತರಯಾಮಿ ಅಂದರೆ ಎಲ್ಲರ ಆಂತರ್ಯದಲ್ಲಿ ಆತ್ಮರೂಪದಲ್ಲಿ ವ್ಯಾಪಿಸಿಕೊಂಡಿದ್ದಾನೆ. ಅಂತಹ ಭಗವಂತನನ್ನು ಅಂದರೆ ಆಂತರ್ಯದಲ್ಲಿರುವ ಆತ್ಮನನ್ನು ಸಾಕ್ಷಾತ್ಕರಿಸಕೊಳ್ಳಬೇಕಾದರೆ ಯಾರಾದರೂ ಅಂತರ್ಮುಖರಾಗಬೇಕೆಂದು ಹೇಳಲಾಗಿದೆ. ಅದರ ಮಾರ್ಗವೇ ಧ್ಯಾನ. ಅಂದರೆ ಯಾರಾದರೂ ಆತ್ಮಸಾಕ್ಷಾತ್ಕರಕ್ಕೆ ಧ್ಯಾನ ಮಾಡಬೇಕಾದ್ದೆ.

ಇಲ್ಲಿ ಕಣ್ಣುಗಳನ್ನು ಮುಚ್ಚಿಕೊಂಡು ಧ್ಯಾನ ಮಾಡಿದರೆ ಅಂತರ್ಮುಖರು ಹೇಗೆ ಆಗುತ್ತೇವೆ? ಆತ್ಮದ ಮೇಲೆ ದೃಷ್ಟಿ ಇಡಬಲ್ಲೆವು? ಆತ್ಮಸಾಕ್ಷಾತ್ಕಾರ ಹೇಗೆ ಹೊಂದಬಲ್ಲೆವು? ಎನ್ನುವ ಸಂದೇಹ ಅನೇಕ ಜನರಿಗೆ ಉಂಟಾಗುತ್ತದೆ. ಇದನ್ನು ಕುರಿತು ಸ್ವಲ್ಪ ವಿವರವಾಗಿ ತಿಳಿದುಕೊಳ್ಳೋಣ.

ಅಂತರ್ಮುಖತೆ ಅಂದರೆ ಒಳನೋಟ ಎನ್ನುತ್ತಾರೆ. ನಾವು ಕಣ್ಣುಗಳನ್ನು ತೆರೆದಿಟ್ಟರೆ ಬಾಹ್ಯ ದೃಷ್ಟಿಯೇ ಇರುತ್ತದೆ ಹೊರತು ಅಂತರ್ ದೃಷ್ಟಿ ಇರುವುದಿಲ್ಲ. ಆದ್ದರಿಂದ ಕಣ್ಣುಗಳನ್ನು ಮುಚ್ಚುತ್ತೇವೆ. ಕಣ್ಣುಗಳನ್ನು ಮುಚ್ಚಿದ ತಕ್ಷಣ ಬಾಹ್ಯದಿಂದ ದೃಷ್ಟಿ ಮರಳಿಸಿದ ಹಾಗೆ. ಆದರೆ ಕಣ್ಣುಗಳನ್ನು ಮುಚ್ಚಿದ ತಕ್ಷಣ ಯಾರಿಗಾದರೂ ಸರಿಯೇ ಆಲೋಚನೆಗಳು ಬರುತ್ತವೆ. ಸಹಜವಾಗಿ ಆಲೋಚನೆಗಳೆಲ್ಲಾ ಬಾಹ್ಯ ವಿಷಯಗಳಿಗೆ ಸಂಬಂಧಿಸಿದ್ದೇ ಆಗಿರುತ್ತವೆ.

ಅಂದರೆ ಕಣ್ಣುಗಳನ್ನು ಮುಚ್ಚಿದರೂ ನಾವು ಆಂತರ್ಯದಲ್ಲಿ ಹೋಗಲಿಲ್ಲ. ಬಾಹ್ಯ ಸಂಬಂಧವಾದ ಆಲೋಚನೆಗಳಿಂದ ಬಾಹ್ಯದಲ್ಲೇ ಇದ್ದೇವೆ.

ಆದರೆ ಆಂತರ್ಯದಲ್ಲಿ ಹೋಗಬೇಕೆಂದರೆ ತಪ್ಪದೇ ಆಲೋಚನೆಗಳೆಲ್ಲಾ ನಿಂತು ಹೋಗಬೇಕು. ಮನಸ್ಸು ಶೂನ್ಯವಾಗಿಬಿಡಬೇಕು.

ಹಾಗೆ ಆಗಬೇಕಾದರೆ ಸುಲಭವಾದ ಮಾರ್ಗ "ಶ್ವಾಸದ ಮೇಲೆ ಧ್ಯಾಸ" ಯಾವಾಗ ಆಲೋಚನೆಗಳು ಬರುತ್ತವೆಯೋ ಆಗ ಆಲೋಚನೆಗಳನ್ನು ಕಟ್ ಮಾಡಿ "ಶ್ವಾಸದ ಮೇಲೆ ಧ್ಯಾಸ" ಇಡಬೇಕು. ಹಾಗೆ ಮಾಡುತ್ತಾ... ಮಾಡುತ್ತಾ... ನಿಧಾನವಾಗಿ ಆಲೋಚನೆಗಳು ಕಡಿಮೆ ಆಗುತ್ತಾ... ಆಗುತ್ತಾ... ನಮಗೆ ತಿಳಿಯದೆಯೇ ಆಲೋಚನೆಗಳು ನಿಂತುಹೋಗುತ್ತವೆ. ಹೀಗೆ ಆಲೋಚನೆಗಳು ನಿಂತು ಹೋಗುತ್ತವೆ. ಹಾಗೆ ಆಲೋಚನೆಗಳು ನಿಂತು ಹೋದ ತಕ್ಷಣ ನಾವು ಅಂತರ್ಮುಖರಾದ ಹಾಗೆ. ಅಲ್ಲಿ ದೇಹವೂ ಇಲ್ಲ, ಮನಸ್ಸು ಇಲ್ಲ, ಇರುವುದು ಆತ್ಮ ಒಂದೇ. ಅಂತಹ ಸ್ಥಿತಿಯಲ್ಲಿ ಇರುತ್ತಾ... ಇರುತ್ತಾ... ಕೆಲವು ದಿನಗಳಿಗೆ ಆತ್ಮಸಾಕ್ಷಾತ್ಕಾರವಾಗುತ್ತದೆ. ಅದಕ್ಕೆ ಬಾಬಾ ಅಂತರ್ಮುಖರಾಗಿ ಎಂದು ಹೇಳಲು ಕಾರಣವಾಗಿತ್ತು.

**(4) ಪಾಪ ವಿಮೋಚನೆಯನ್ನು ಹೊಂದುವುದು :– "ಮನುಷ್ಯನು ದುರ್ಮಾರ್ಗದಿಂದ ಬುದ್ಧಿಯನ್ನು ಮರಳಿಸದೇ ಇದ್ದರೆ, ತಪ್ಪುಗಳು ಮಾಡುವುದನ್ನು ಬಿಡದೇ ಇದ್ದರೇ, ಮನಸ್ಸನ್ನು ಚಲಿಸದೇ, ನಿಲ್ಲಿಸಲಾರದೇ ಇದ್ದರೇ, ಜ್ಞಾನದಿಂದ ಕೂಡ ಆತ್ಮ ಸಾಕ್ಷಾತ್ಕಾರವನ್ನು ಹೊಂದಲಾರನು".**

**ವಿವರಣೆ :–** ಯಾರ ಬುದ್ಧಿ ಸರಿಯಾದ ನಿರ್ಣಯಗಳನ್ನು ತೆಗೆದುಕೊಳ್ಳುವುದಿಲ್ಲವೋ, ಮಾಡಬಾರದ ಕೆಲಸಗಳನ್ನು ಮಾಡಿಸುತ್ತದೋ! ಅಧರ್ಮದ ಕೆಲಸಗಳನ್ನು ಮಾಡಿಸುತ್ತದೆಯೋ! ಹಾಗೆಯೇ ಮಾನವನು ತಪ್ಪುಗಳು ಮಾಡುವುದನ್ನು ಬಿಡುವುದಿಲ್ಲವೋ, ಹಾಗೆಯೇ ಕಣ್ಣುಗಳನ್ನು ಮುಚ್ಚಿಕೊಂಡ ಮನಸ್ಸು ಚಂಚಲವಾಗಿ ಬಗೆ–ಬಗೆಯ ಆಲೋಚನೆಗಳಿಂದ ಇರುತ್ತದೆಯೋ, ಅಂತಹವರು ಆತ್ಮಸಾಕ್ಷಾತ್ಕರವನ್ನು ಹೊಂದಲಾರ ರೆಂದು ಬಾಬಾ ಹೇಳಿದರು.

ಇಲ್ಲಿ ಮನಸ್ಸು ಚಂಚಲವಾಗುವುದು ಅಂದರೆ ಕಣ್ಣುಗಳು ಮುಚ್ಚಿಕೊಂಡಾಗ ಯಾರಿಗಾದರೂ ಬಗೆ–ಬಗೆಯ ಆಲೋಚನೆಗಳು ಬರುತ್ತಿರುತ್ತವೆ. ಸ್ವಲ್ಪ ಹೊತ್ತು ಗತವನ್ನು ಕುರಿತಾದ ಆಲೋಚನೆಗಳು, ಸ್ವಲ್ಪ ಹೊತ್ತು ಭವಿಷತ್ತಿನ ಕುರಿತು ಆಲೋಚನೆಗಳು. ಅಂದರೆ ಮನಸ್ಸು ಆಕಡೆ, ಈಕಡೆ, ತೂಗುತ್ತಾ ಚಂಚಲವಾಗಿರುತ್ತದೆ ಆದರೆ

ನಿಶ್ಚಲವಾಗಿರುವುದಿಲ್ಲ. ಇದು ಆತ್ಮ ಸಾಕ್ಷಾತ್ಕಾರಕ್ಕೆ ಅನುಕೂಲವಾದದ್ದಲ್ಲ. ಆದ್ದರಿಂದ ಮುಂಚಿತವಾಗಿ ಮನಸ್ಸನ್ನು ನಿಲ್ಲಿಸಬೇಕು. ಅದಕ್ಕೆ 'ಶ್ವಾಸದ ಮೇಲೆ ಧ್ಯಾಸ' ಇಡಬೇಕು. ಹಾಗೆ ಅನಾಪಾನಸತಿ ಧ್ಯಾನ ಮಾಡಿದಾಗ ಆಲೋಚನೆಗಳು ನಿಧಾನಕ್ಕೆ ಕಡಿಮೆ ಆಗುತ್ತಾ ಸ್ವಲ್ಪ ಹೊತ್ತಿಗೆ ಆಲೋಚನೆಗಳೆಲ್ಲಾ ನಿಂತುಹೋಗುತ್ತವೆ. ಅದೇ ನಿಶ್ಚಲ ಸ್ಥಿತಿ, ಆತ್ಮಸಾಕ್ಷಾತ್ಕರಕ್ಕೆ ಮುಂಚಿತವಾಗಿ ಇಂತಹ ಸ್ಥಿತಿ ಸಂಪಾದಿಸಬೇಕು. ಅದೇ ಬಾಬಾ ಹೇಳಿರುವ ಸಂದೇಶ.

**(5) ಸರಿಯಾದ ನಡವಳಿಕೆ :–**

**"ಸತ್ಯವನ್ನೇ ನುಡಿಯುತ್ತಾ, ತಪಸ್ಸು ಮಾಡುತ್ತಾ, ಒಳಮುಖ ಪ್ರಯಾಣ ಮಾಡುತ್ತಾ, ಬ್ರಹ್ಮಚಾರಿಯಾಗಿ ಇರದ ವಿನಹ ಆತ್ಮಸಾಕ್ಷಾತ್ಕಾರ ಲಭಿಸುವುದಿಲ್ಲ".**

**ವಿವರಣೆ :–** ಇವುಗಳನ್ನು ಕುರಿತು ಸ್ವಲ್ಪ ತಿಳಿದುಕೊಳ್ಳೋಣ.

**ಸತ್ಯ :–**ಮುಂಚಿತವಾಗಿ ಸತ್ಯವನ್ನು ಕುರಿತು ತಿಳಿದುಕೊಳ್ಳೋಣ. ಯಾವುದು ಸತ್ಯ? ಅಂದರೆ ಸತ್ಯವಾದದ್ದೇ (ನಿತ್ಯವಾಗಿರುವುದೆ) ಸತ್ಯ. ಯಾವುದು ನಿತ್ಯವಾದದ್ದು? ಅಂದರೆ

ಶಾಶ್ವತವಾದದ್ದು. ಯಾವುದು ಶಾಶ್ವತವಾದದ್ದು? ಅಂದರೆ ಎಂದೆಂದಿಗೂ ಇರುವುದು. ಯಾವುದು ಎಂದೆಂದಿಗೂ

ಇರುತ್ತದೆ? ಅಂದರೆ ಯುಗಗಳು ಬದಲಾದರೂ ಬದಲಾಗದೇ ಇರುವುದು. ಅಂತಹದು ಈ ಸೃಷ್ಟಿಯಲ್ಲಿರುವುದು ಯಾವುದು ಎಂದರೆ ಒಂದೇ ಒಂದು ಅದೇ 'ಭಗವಂತ' ಅದೇ 'ಆತ್ಮ' ಆದ್ದರಿಂದ ಆತ್ಮವೇ ಸತ್ಯವೆಂದು ತಿಳಿದುಕೊಳ್ಳಬೇಕು.

ಬಾಬಾ ಸತ್ಯವನ್ನೇ ಮಾತನಾಡಿ ಎಂದು ಹೇಳಿದ್ದಾರೆ. ಅಂದರೆ ಸದಾ ಆ ದೈವತ್ವವನ್ನು ಕುರಿತೇ ಮಾತನಾಡಬೇಕು. ಅಂದರೆ ಹೆಚ್ಚಾಗಿ ಆತ್ಮಕ್ಕೆ ಸಂಬಂಧಿಸಿದ ವಿಷಯಗಳನ್ನು ಜಪಿಸುತ್ತಾ ಇರಬೇಕು. ಆತ್ಮಜ್ಞಾನವನ್ನು ಕುರಿತೇ ಮಾತನಾಡಬೇಕು. ಅನೇಕರು ಸತ್ಯವನ್ನು ಕುರಿತು ಮಾತನಾಡುವುದೆಂದರೆ ನಿಜ ಹೇಳುವುದು ಎಂದುಕೊಳ್ಳುತ್ತಾರೆ. ಆದರೆ ಸತ್ಯ ಬೇರೆ, ನಿಜ ಬೇರೆ.

**ತಪಸ್ಸು** :- ಹಾಗೆಯೇ ಬಾಬಾರವರು ತಪಸ್ಸು ಮಾಡಬೇಕೆಂದರು. ತಪಸ್ಸು ಎಂದರೆ ಎಲ್ಲಿಗೋ ಹೋಗಿ ಒಂದು ಕಾಲ ಮೇಲೆ ನಿಲ್ಲುವುದಲ್ಲ. ತಪಸ್ಸು ಅಂದರೆ ಧ್ಯಾನದಿಂದ ಒಳಮುಖ ಪ್ರಯಾಣ ಮಾಡಿ ನಮ್ಮನ್ನು ನಾವು ತಪಿಸುವ ಹಾಗೆ ಮಾಡುವುದು. ಶುಷ್ಕಿಸಿ (ಇಂಗಿಸಿ)ಕೊಳ್ಳುವುದು.

ಜೀವನದಲ್ಲಿ ಪ್ರತಿಯೊಂದನ್ನು ಕಡಿಮೆಗೊಳಿಸಿಕೊಳ್ಳುವುದೇ ತಪಸ್ಸು. ಋಷಿಗಳ ಹಾಗೆ ನಿಧಾನಕ್ಕೆ ಆಹಾರವನ್ನು ಕಡಿಮೆ ಮಾಡುತ್ತಾ ಇರಬೇಕು. ನಿದ್ರೆಯನ್ನು ಕಡಿಮೆ ಮಾಡಬೇಕು. ಮಾತುಗಳನ್ನು ಕಡಿಮೆ ಮಾಡಬೇಕು. ಎಲ್ಲದರ ಮೇಲೂ, ಎಲ್ಲರ ಮೇಲೂ, ವ್ಯಾಮೋಹ ಕಡಿಮೆ ಮಾಡುತ್ತಿರಬೇಕು. ವ್ಯರ್ಥ ಅಭ್ಯಾಸಗಳನ್ನು ಕಡಿಮೆ ಮಾಡುತ್ತಾ ಇರಬೇಕು. ನಾನು ಎನ್ನುವ ಅಹಂಕಾರ ಕಡಿಮೆಗೊಳಿಸಬೇಕು. ನನ್ನದು ಎನ್ನುವ ಮಮಕಾರ ಕಡಿಮೆ ಮಾಡುತ್ತಿರಬೇಕು. ಬಯಕೆಗಳನ್ನು ಕಡಿಮೆ

ಮಾಡಿಕೊಳ್ಳಬೇಕು. ಹಾಗೆ ಜೀವನದಲ್ಲಿ ಪ್ರತಿ ಒಂದನ್ನು ಕಡಿಮೆ ಮಾಡಿಕೊಳ್ಳುತ್ತಾ ಇರುವುದೇ ತಪಸ್ಸು ಎಂದರು.

ಹಾಗೆ **"ಪ್ರಾಪಂಚಿಕ ವಿಷಯಗಳ ಬಗ್ಗೆ ವಿರಕ್ತಿ. ಆತ್ಮವನ್ನು ಕುರಿತು ಆಸಕ್ತಿ. ಹೆಚ್ಚಾಗಬೇಕು"** ಇದೇ ಆತ್ಮಸಾಕ್ಷಾತ್ಕಾರಕ್ಕೆ ಮಾರ್ಗ ಎಂದು ಬಾಬಾ ಹೇಳಿದರು.

**ಒಳನೋಟ** :-ಅಂದರೆ ಧ್ಯಾನ ಮಾಡಬೇಕು. 'ಶ್ವಾಸದ ಮೇಲೆ ಧ್ಯಾಸ' ಇಡಬೇಕು. ಪ್ರಾರಂಭದಲ್ಲಿ ಸಮಯವಿದ್ದಾಗ, ಅನಂತರ ಸಮಯ ಮಾಡಿಕೊಂಡು ಧ್ಯಾನದ ಮೂಲಕ ಒಳಗೆ ಇರುವ ಆತ್ಮದ ಮೇಲೆ ದೃಷ್ಟಿ ಇಡಬೇಕು.

**ಬ್ರಹ್ಮಚಾರಿಯಾಗಿರಬೇಕು** :- ಬ್ರಹ್ಮಚಾರಿಯಾಗಿ ಇರಬೇಕು ಅಂದರೆ ಸಂಸಾರವನ್ನು ತ್ಯಜಿಸಬೇಕೇನೋ ಎಂದುಕೊಳ್ಳುತ್ತಾರೆ. ಹಾಗೆ ಎಂದುಕೊಂಡು ಇವೆಲ್ಲಾ ನಮಗೆ ಹೇಗೆ ಸಾಧ್ಯವಾಗುತ್ತದೆ? ನಮ್ಮಿಂದ ಆಗುವುದಿಲ್ಲ! ಅದು ಯಾರೋ ಮಹಾತ್ಮರಿಗೆ ಕಾರಣ ಜನ್ಮ ಪಡೆದಿರುವವರಿಗೆ ಪೂರ್ವಜನ್ಮದ ಸುಕೃತ (ಪುಣ್ಯ) ಇರುವವರಿಗೆ ಮಾತ್ರ ಸಾಧ್ಯ. ಆದರೆ ನಮ್ಮಂತ ಸಾಮಾನ್ಯರಿಗೆ ಅವು ಹೇಗೆ ಸಾಧ್ಯವಾಗುತ್ತವೆ? ಎಲ್ಲಾ ಬಿಟ್ಟು ಇವೆಲ್ಲಾ ಸಾಧಿಸಬೇಕೆಂದರೆ (ಆಚರಿಸಬೇಕಾದರೆ) ತುಂಬಾ ಕಷ್ಟ ಏನೋ! ನಮ್ಮ ಜೀವನದಲ್ಲಿ ಕುಂದು ಕೊರತೆ ಇಲ್ಲದೇ ಇದ್ದರೆ ಸಾಕು ಎಂದುಕೊಳ್ಳುತ್ತಿರುತ್ತಾರೆ.

ಆದರೆ ಬ್ರಹ್ಮಚಾರಿ ಅಂದರೆ ಸಂಸಾರಕ್ಕೆ ದೂರವಾಗಿರುವುದಲ್ಲ. (ಸಂಸಾರವನ್ನು ಅಗಲಿ ಇರುವುದಲ್ಲ) ಬ್ರಹ್ಮನಲ್ಲಿ (ಒಂದಾಗು)ವವನೇ ಬ್ರಹ್ಮಚಾರಿ. ಬ್ರಹ್ಮವು ಅಂದರೆ ಭಗವಂತನು. ಅಂದರೆ ಆತ್ಮ. ಯಾವಾಗ ಯಾವ ಕೆಲಸ ಮಾಡಿದರೂ ಎಲ್ಲರೂ ಆತ್ಮ ಸ್ವರೂಪರೇ. ಎಲ್ಲರೂ ಒಂದೇ ಎನ್ನುವ ಭಾವನೆಯಿಂದ ಮಾಡಬೇಕು. ಸಮಸ್ತ ಚರಾಚರ ದೈವವೇ. ಎಲ್ಲಾ ದೈವಮಯ ದೈವತ್ವ ಬಿಟ್ಟು ಬೇರೆ ಏನೂ ಇಲ್ಲ. ಎನ್ನುವ ಭಾವನೆಯಿಂದ ಜೀವಿಸುವುದೇ ಬ್ರಹ್ಮದಲ್ಲಿ ಚರಿಸುವುದು. ಅಂತವರೇ ಬ್ರಹ್ಮಚಾರಿ ಆಗುತ್ತಾರೆ. ಇದುಕೂಡ ಆತ್ಮಸಾಕ್ಷಾತ್ಕಾರಕ್ಕೆ ಒಂದು (ಒಂದಾಗು) ಮಾರ್ಗ.

ಅದಕ್ಕೆ ಬಾಬಾರವರು "ಸಬ್ಕಾ ಮಾಲಿಕ್ ಏಕ್ ಹೈ" ಎಂದು ಸದಾ ಹೇಳುತ್ತಿದ್ದರು.

**(6) ಪ್ರಿಯವಾದದ್ದನ್ನು ಬಯಸುವುದಕ್ಕಿಂತ ಶ್ರೇಯಸ್ಕರವಾದದ್ದನ್ನು ಬಯಸುವುದು :–**

**ಈ ಜಗತ್ತಿನಲ್ಲಿ ಎರಡು ಬಗೆಯ ವಸ್ತುಗಳಿವೆ. ಒಂದು ಒಳ್ಳೆಯದು, (ಶ್ರೇಯಸ್ಕರವಾದದ್ದು) ಎರಡನೆಯದು ಪ್ರೀತಿಕರವಾದದ್ದು, ಮೊದಲನೆಯದು ವೇದಾಂತ ವಿಷಯಗಳಿಗೆ ಸಂಬಂಧಿಸಿದ್ದು. ಈ ಎರಡು ಮಾನವ ಜೀವನದಲ್ಲಿ ಎದುರಾಗುತ್ತವೆ. ಇದರಲ್ಲಿ ಒಂದನ್ನು ಮಾನವನು ಆರಿಸಿಕೊಳ್ಳಬೇಕು. ಬುದ್ಧಿವಂತನು ಮೊದಲನೆಯದನ್ನು ಅಂದರೆ ಶುಭಕರವಾದದ್ದನ್ನು ಬಯಸುತ್ತಾನೆ. ಬುದ್ಧಿ ಕಡಿಮೆ ಇರುವವನು ಕೆಟ್ಟದನ್ನು ಕೋರುತ್ತಾನೆ".**

**ವಿವರಣೆ :–** ಶಾಸ್ತ್ರಗಳಲ್ಲಿ ಕೂಡ ನಮಗೆ ಎರಡು ಮಾರ್ಗಗಳನ್ನು ಸೂಚಿಸಲಾಗಿದೆ.

(1) ಶ್ರೇಯೋ ಮಾರ್ಗ

(2) ಪ್ರೇಮೋ ಮಾರ್ಗ.

ಶ್ರೇಯಸ್ಕರವನ್ನು ಬಯಸುವವರು ಶ್ರೇಯೋ ಮಾರ್ಗವನ್ನು ಅನುಸರಿಸುತ್ತಾರೆ. ಪ್ರಿಯವಾದನ್ನು ಬಯಸುವವರು ಪ್ರೇಮೋ ಮಾರ್ಗವನ್ನು ಅನುಸರಿಸುತ್ತಾರೆ. ಶ್ರೇಯಸ್ಕರ ಎಂದರೆ ನಮಗೆ ಒಳ್ಳೆಯದನ್ನು ಉಂಟುಮಾಡುವುದು. ಅಂದರೆ ಮುಕ್ತಿಯನ್ನು ನೀಡುವುದು. ಅಂದರೆ ಕಷ್ಟಗಳನ್ನು ದೂರಮಾಡುವುದು. ದುಃಖವನ್ನು ಶಾಶ್ವತವಾಗಿ ತೊಲಗಿಸಿ ಶಾಶ್ವತವಾದ ಬ್ರಹ್ಮಾನಂದವನ್ನು ಉಂಟುಮಾಡುವುದು.

ಪ್ರಿಯವಾದದ್ದು ಅಂದರೆ ಇಷ್ಟವಾದದ್ದು. ನಮಗೆ ಬಗೆ–ಬಗೆಯ ಇಷ್ಟಗಳಿರುತ್ತವೆ. ಆ ಇಷ್ಟಗಳನ್ನು ನೆರವೇರಿಸಿಕೊಳ್ಳಲು ಪ್ರಯತ್ನಿಸುತ್ತೇವೆ. ಸಾಧಾರಣವಾಗಿ ಎಲ್ಲರಿಗೂ ಹಣವೆಂದರೆ ಇಷ್ಟ. ವಿಲಾಸಕರವಾದ ಗೃಹೋಪಕರಣಗಳೆಂದರೆ ಇಷ್ಟ. ಬಂಗಲೆಗಳೆಂದರೆ ಇಷ್ಟ. ಭೋಗ–ಭಾಗ್ಯಗಳೆಂದರೆ ಇಷ್ಟ. ಸಿರಿ–ಸಂಪತ್ತುಗಳೆಂದರೆ ಇಷ್ಟ. ಅಷ್ಟೇ ಯಾಕೆ ಅಂತಹ ಜೀವನವೆಂದರೇನೇ ಇಷ್ಟ. ಇನ್ನೂ ಪದವಿಗಳೆಂದರೆ ಇಷ್ಟ. ದೊಡ್ಡ–ದೊಡ್ಡ ಉದ್ಯೋಗಗಳೆಂದರೆ ಇಷ್ಟ. ಸಂಸಾರವೆಂದರೆ ಇಷ್ಟ. ಮಕ್ಕಳೆಂದರೆ ಇಷ್ಟ. ಹೆಂಡತಿ ಎಂದರೆ ಇಷ್ಟ. ಗಂಡ ಎಂದರೆ ಇಷ್ಟ. ಹೀಗೆ ಹೇಳುತ್ತಾ ಹೋದರೆ ಯಾರಿಗಾದರೂ ಈ ಪ್ರಪಂಚದಲ್ಲಿ ಕಾಣಿಸುವುದೆಲ್ಲಾ ತುಂಬಾ ಇಷ್ಟ. ಒಂದು ರೀತಿಯಲ್ಲಿ ಈ ಪ್ರಾಪಂಚಿಕವಾದದ್ದು ಅಂದರೆ ತುಂಬಾ ತುಂಬಾ ಇಷ್ಟ. ಎಲ್ಲರಿಗೂ ಅವೇ ಪ್ರಿಯವಾದದ್ದು. ಅದಕ್ಕೆ ಎಲ್ಲರೂ ಈ ಪ್ರೇಮೋ ಮಾರ್ಗವನ್ನೇ ಅನುಸರಿಸುತ್ತಿದ್ದಾರೆ.

ನಿಜವಾಗಲೂ ಬುದ್ಧಿವಂತರು ಯಾರೆಂದರೆ "ತನಗೆ ಇಷ್ಟವಾದದ್ದನ್ನು ಬಯಸುವವರಿಗಿಂತಾ ಸ್ವಲ್ಪ ಕಷ್ಟವಾದರೂ ತನಗೆ ಶಾಶ್ವತವಾಗಿ ಒಳ್ಳೆಯದಾಗುವುದನ್ನು

ಬಯಸುವವರು", ಏಕೆಂದರೆ ಮಾನವನು ತನಗೆ ಇಷ್ಟವಾದದ್ದನ್ನು ಎಷ್ಟು ಸಂಪಾದಿಸಿಕೊಂಡರೂ ದುಃಖದಲ್ಲೇ ಜೀವಿಸುತ್ತಿದ್ದಾನೆ. ಅಶಾಂತಿಗೆ ಒಳಗಾಗಿದ್ದಾನೆ. ಸಮಸ್ಯೆಗಳಿಂದ ದಿಕ್ಕುತೋಚದವನಂತಾಗುತ್ತಿದ್ದಾನೆ. ಗಮನಿಸಿದರೆ ಮಾನವರ ಹತ್ತಿರ ಎಲ್ಲಾ ಇದೆ. ಆದರೆ ಯಾರಿಗೂ ಶಾಂತಿ ಇಲ್ಲ. ಸರಿಯಾದ ಆರೋಗ್ಯವಿಲ್ಲ. ಕುಟುಂಬದಲ್ಲಿ ಸರಿಯಾದ ಭಾಂಧವ್ಯಗಳಿಲ್ಲ. ಒಬ್ಬರಿಗೊಬ್ಬರಿಗೆ ಸರಿಯಾದ ಅರಿವಿಲ್ಲ. ಎಲ್ಲಾ ಒಂದೇ ಆದರೂ ಸಮಾಜದಲ್ಲಿ ಕುಲದ ಹೆಸರಿನಲ್ಲಿ ಅನೇಕ ಘರ್ಷಣೆಗಳು, ಮತಘರ್ಷಣೆಗಳು, ಪ್ರಾಂತೀಯ ಮತ–ಬೇಧಗಳು, ಯಾರನ್ನು ನೋಡಿದರೂ ಸುಖ–ಸಂಪತ್ತಿದೆ. ಆದರೆ ಪೂರ್ಣವಾಗಿ ಅನುಭವಿಸಲಾರದೇ ಹೋಗುತ್ತಿದ್ದಾರೆ. ಶಾಂತಿಯಿಂದ ಜೀವಿಸಲಾರದೇ ಹೋಗುತ್ತಿದ್ದಾರೆ.

ಇದಕ್ಕೆ ಕಾರಣ ಪ್ರತಿ ಒಬ್ಬರೂ ಪ್ರಿಯವಾದದ್ದನ್ನೇ ಬಯಸುವುದು. ಪ್ರೇಮೋ ಮಾರ್ಗವನ್ನು ಅನುಸರಿಸುವುದೇ ಎಲ್ಲರೂ ತಮ್ಮ ಒಳಿತನ್ನು ನೋಡಿಕೊಳ್ಳುತ್ತಿದ್ದಾರೆ ವಿನಹ ಇತರರ ಕಷ್ಟಗಳನ್ನು ಗಮನಿಸುತ್ತಿಲ್ಲ. ಚಿಕ್ಕ ಉದಾಹರಣೆ ನೋಡೋಣ.

ಮಾಂಸಹಾರಿಗಳು ತಮಗಿಷ್ಟವೆಂದು ಮಾಂಸಹಾರವನ್ನು ತಿನ್ನುತ್ತಿದ್ದಾರೆ. ಆದರೆ ತಾವು ಆ ಕೆಲಸ ಮಾಡುವುದರಿಂದ ಅದೆಷ್ಟೋ ಪ್ರಾಣಿಗಳು ಹಿಂಸೆಗೆ ಗುರಿ ಆಗುತ್ತವೆಯೋ! ಸಾಯಿಸಲ್ಪಡುತ್ತಿವೆಯೋ! ಅವು ತಮ್ಮ ಕಷ್ಟಗಳನ್ನು ಹೇಳಿಕೊಳ್ಳಲಾರದೆ ಮೌನವಾಗಿ ಹೇಗೆ ರೋಧಿಸುತ್ತಿವೆಯೋ! ಇವೆಲ್ಲಾ ಮಾನವರು ಗುರ್ತಿಸುತ್ತಿಲ್ಲ. ಸದಾ ತಮ್ಮ ಇಷ್ಟವನ್ನೇ ನೋಡಿಕೊಳ್ಳುತ್ತಿದ್ದಾರೆ

ಅದಕ್ಕೆ ಬಾಬಾರವರು ಸ್ಪಷ್ಟವಾಗಿ ಹೇಳಿದ್ದಾರೆ. "ಬುದ್ಧಿವಂತನು ಶುಭಕರವಾದದ್ದನ್ನೇ ಬಯಸುತ್ತಾನೆ. ಬುದ್ಧಿಹೀನನು ಪ್ರಿಯವಾದುದ್ದನ್ನೇ ಬಯಸುತ್ತಾನೆ". ಎಂದು ಇದರಿಂದ ನೋಡಿದರೆ ಇಷ್ಟವಾದದ್ದನ್ನು ಬಯಸುವವನು ಬುದ್ಧಿ ಕಡಿಮೆ ಇರುವವನೇ ಎಂದು ನಾವು ತಿಳಿದುಕೊಳ್ಳಬಹುದು. ಆದ್ದರಿಂದ ನಮ್ಮ ಇಷ್ಟಗಳನ್ನು ಬದಿಗಿಟ್ಟು ಭಗವಂತನಿಗೆ ಏನು ಇಷ್ಟವೋ ತಿಳಿದುಕೊಳ್ಳಬೇಕು. ಸ್ವಲ್ಪ ಯೋಚಿಸಿ. ಎಲ್ಲರೂ ಅವರವರಿಗೆ ಇಷ್ಟ ಬಂದಹಾಗೆ ಮಾಡುತ್ತಿದ್ದಾರೆ ಆದರೆ ತಾವು ಮಾಡುವ ಕೆಲಸ ದೇವನು ಮೆಚ್ಚುತ್ತಿದ್ದಾನಾ? ಇಲ್ಲವಾ? ಎಂದು ನೋಡುತ್ತಿಲ್ಲ. ಸದಾ ತನ್ನ ದೃಷ್ಟಿಯಿಂದ (ಮನಬಂದ ಹಾಗೆ) ಯೋಚಿಸುತ್ತಿದ್ದಾನೆ. ಆದರೆ ದೇವರ ದೃಷ್ಟಿಯಲ್ಲಿ ಸೃಷ್ಟಿಯಲ್ಲಿರುವುದೆಲ್ಲಾ ಶ್ರೇಷ್ಟವಾದದ್ದೇ! ಎಲ್ಲಾ ದೇವರಿಗೆ ಇಷ್ಟವಾದದ್ದೇ. ಕಾರಣ ಎಲ್ಲಾ ಆತನ ಸೃಷ್ಟಿಯೇ ಆದ್ದರಿಂದ.

ಅದಕ್ಕಾಗಿ ಎಲ್ಲರೂ ಇಷ್ಟ ಪಡುವ ಪ್ರಾಪಂಚಿಕ ಮಾರ್ಗಕ್ಕಿಂತಾ ಭಗವಂತನು ಮೆಚ್ಚುವ ಆಧ್ಯಾತ್ಮಿಕ ಮಾರ್ಗವನ್ನು ಅನುಸರಿಸಬೇಕು. ಅಂತವರೇ ಬುದ್ಧಿವಂತರು. ಅದೇ ಮಾನವನಿಗೆ ಶ್ರೇಯಸ್ಸನ್ನು ಉಂಟುಮಾಡುತ್ತದೆ. ದುಃಖವನ್ನು ನಿವಾರಿಸುತ್ತದೆ. ಆನಂದವನ್ನು ಉಂಟುಮಾಡುತ್ತದೆ. ಆ ಮಾರ್ಗವೇ ಆಧ್ಯಾತ್ಮಿಕ ಮಾರ್ಗ. ಆತ್ಮಮಾರ್ಗ, ಅದೇ ಧ್ಯಾನ ಮಾರ್ಗ, ಯಾರು ಧ್ಯಾನಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡುತ್ತಾರೋ! ಧ್ಯಾನ ಮಾಡಲು ಇಷ್ಟ ಪಡುತ್ತಾರೋ! ಅವರೇ ಬುದ್ಧಿವಂತರು. ಅವರೇ ಕೊನೆಗೆ ಆತ್ಮಸಾಕ್ಷಾತ್ಕಾರವನ್ನು ಹೊಂದಿ ಮುಕ್ತಿಯನ್ನು ಹೊಂದಬಲ್ಲರು.

(7) ಮನಸ್ಸನ್ನು, ಇಂದ್ರಿಯಗಳನ್ನು ಸ್ವಾಧೀನಪಡಿಸಿಕೊಳ್ಳುವುದು :–

**"ಶರೀರವು ಒಂದು ರಥ ಇದ್ದಹಾಗೆ, ಆತ್ಮ ಅದರ ಯಜಮಾನ. ಬುದ್ಧಿ ಆ ರಥವನ್ನು ನಡೆಸುವ (ಓಡಿಸುವ) ಸಾರಥಿ. ಮನಸ್ಸು ಕಡಿವಾಣ (ಲಗಾಮು) ಈ ಇಂದ್ರಿಯಗಳೇ ಕುದುರೆಗಳು. ಇಂದ್ರಿಯ ವಿಷಯಗಳೇ ಅದರ ಮಾರ್ಗವು. ಯಾರಿಗೆ ಗ್ರಹಿಸುವ ಶಕ್ತಿ ಇಲ್ಲವೋ! ಯಾರ ಮನಸ್ಸು ಚಂಚಲವಾದದ್ದೊ, ಯಾರ ಇಂದ್ರಿಯಗಳು ಅಸ್ವಾಧೀನದಲ್ಲಿ**

**(ಗಾಡಿ ಓಡಿಸುವವನ ದುರ್ಮಾರ್ಗದ ಕುದುರೆಗಳ ಹಾಗೆ) ಇರುವುದೋ ಅಂತವನು ಗಮ್ಯಸ್ಥಾನವನ್ನು ತಲುಪಲಾರನು. ಹುಟ್ಟು, ಸಾವು, ಎನ್ನುವ ಚಕ್ರದಲ್ಲಿ ಸಿಕ್ಕಿಹಾಕಿಕೊಳ್ಳುವನು"**

**"ಯಾರಿಗೆ ಗ್ರಹಿಸುವ ಶಕ್ತಿ ಇದೆಯೋ! ಯಾರ ಮನಸ್ಸು ಸ್ವಾಧೀನದಲ್ಲಿರುವುದೋ, ಯಾರ ಇಂದ್ರಿಯಗಳು ಸ್ವಾಧೀನದಲ್ಲಿರುವುದೋ, (ಗಾಡಿ ಓಡಿಸುವವನ ಒಳ್ಳೆಯ ಕುದುರೆಗಳ ಹಾಗೆ) ಯಾರು ತನ್ನ ಬುದ್ಧಿಯನ್ನು ಮಾರ್ಗದರ್ಶಿ ಎಂದು ಗ್ರಹಿಸಿ ತನ್ನ ಮನಸ್ಸನ್ನು ಲಗಾಮಿನಿಂದ ಎಳೆದು ಹಿಡಿದುಕೊಳ್ಳಬಲ್ಲನೋ! ಅವನು ತನ್ನ ಗಮ್ಯಸ್ಥಾನವನ್ನು ಸೇರಬಲ್ಲನು".**

**ವಿವರಣೆ :–** ಇಲ್ಲಿ ಕುದುರೆ ಗಾಡಿಯಲ್ಲಿ ಪ್ರಯಾಣಿಸುವ ಗಮ್ಯವು ಬೇರೆ, ಹಾಗೆಯೇ ದೇಹ ಎನ್ನುವ ಗಾಡಿಯಿಂದ ಜೀವನ ಪ್ರಯಾಣ ಸಾಗಿಸುವ ಮಾನವನ ಗಮ್ಯ ಬೇರೆ, ಮಾನವನ ಗಮ್ಯ ವಿಷ್ಣು ಪಥವು. ಆ ಗಮ್ಯವನ್ನು ತಲುಪುವವರೆಗೂ ಮಾನವನು ಹುಟ್ಟು, ಸಾವು ಎನ್ನುವ ಚಕ್ರದಲ್ಲಿ ಸಿಕ್ಕಿಹಾಕಿಕೊಳ್ಳುತ್ತಾನೆ. ಅದರೊಳಗಿಂದ ಹೊರಗೆ ಬರಲಾರ. ಹಾಗೇ ಹುಟ್ಟುತ್ತಾ... ಸಾಯುತ್ತಾ... ತುಂಬಾ ದುಃಖವನ್ನು ಅನುಭವಿಸುತ್ತಾ ಇರುತ್ತಾನೆ. ರೋಗಗಳಿಂದ ಬಳಲುತ್ತಾ, ಸಂಪಾದಿಸಿದ್ದೆಲ್ಲಾ ಕಳೆದು ಹೋಗುತ್ತದೇನೋ ಎಂದು ಭಯಪಡುತ್ತಾ, ಹೆಂಡತಿ ಮಕ್ಕಳನ್ನು ಕುರಿತು, ಸಂಪತ್ತುಗಳನ್ನು ಕುರಿತು, ಆಂದೋಲನೆಗೆ ಒಳಗಾಗುತ್ತಾನೆ. ಹಾಗೆ ಜನ್ಮತಾಳಿದಾಗಿನಿಂದ ಮರಣಿಸುವವರೆಗೂ ಎಲ್ಲಾ ದುಃಖಮಯ. ಹಾಗೆಯೇ ಆದಿ ಭೌತಿಕ, ಆದಿ ಆಧ್ಯಾತ್ಮಿಕತೆ, ಆದಿ ದೈವಿಕ, ಎನ್ನುವ ತಾಪತ್ರಯಗಳು ತಪ್ಪುವುದಿಲ್ಲ. ಎಷ್ಟು ಪುಣ್ಯಕಾರ್ಯಗಳನ್ನು ಮಾಡಿದರೂ ಎಷ್ಟು ಒಳ್ಳೆಯ ಕೆಲಸಗಳನ್ನು ಮಾಡಿದರೂ, ಎಂತಹ ಧನವಂತನಾದರೂ, ಜನ್ಮಿಸಿದ ಪ್ರತಿಯೊಬ್ಬರಿಗೂ ಈ ನಾಲಕ್ಕೂ ಬಗೆಯ ದುಃಖಗಳು ಅಂದರೆ 1) ಜನ್ಮ ದುಃಖವು, 2) ಜರಾ (ಮುದಿತನ) ದುಃಖವು, 3) ವ್ಯಾಧಿ ದುಃಖವು, 4) ಮರಣ ದುಃಖವು, ಕೂಡ ಇರುತ್ತದೆ

ಆದ್ದರಿಂದ ಪ್ರತಿ ಒಬ್ಬರೂ ಇವುಗಳಿಂದ ಹೊರ ಬರಲು ಪ್ರಯತ್ನ ಮಾಡಬೇಕು. ಇಲ್ಲದ್ದಿದ್ದರೆ ಎಷ್ಟು ಜನ ದೇವರುಗಳನ್ನು ಆಶ್ರಯಿಸಿದರೂ. ಜೀವನದಾದ್ಯಂತ ಆರಾಧನೆಗಳನ್ನು ಮಾಡುತ್ತಿದ್ದರೂ ಪ್ರಯೋಜನವಿಲ್ಲ. ಇವೆಲ್ಲದರಿಂದ ಹೊರಬರಬೇಕಾದರೆ ತಪ್ಪದೇ ಮಾನವ ಜನ್ಮದ ಗಮ್ಯವಾಗಿರುವ ವಿಷ್ಣು ಪಥವನ್ನು ತಪ್ಪದೇ ಹೊಂದಬೇಕಾದ್ದೆ, ಅದನ್ನು ಆತ್ಮಸಾಕ್ಷಾತ್ಕಾರ ಎಂದೂ ಸಹ ಹೇಳುತ್ತಾರೆ.

ಅದನ್ನು ಸಾಧಿಸದೇ ಬಾಬಾರವರು ಮನಸ್ಸನ್ನು, ಇಂದ್ರಿಯಗಳನ್ನೂ, ಸ್ವಾಧೀನದಲ್ಲಿ ಇಟ್ಟುಕೊಳ್ಳಬೇಕೆಂದರು. ದುರ್ಮಾರ್ಗದ ಕುದುರೆಗಳಿದ್ದರೆ ಗಾಡಿ ಓಡಿಸುವವನು ಹೇಗೆ ಗಮ್ಯ (ಗುರಿ)ಯನ್ನು ತಲುಪಲಾರನೋ! ಚಂಚಲ ಮನಸ್ಸಿನಿಂದ ಇಂದ್ರಿಯಗಳು ಸ್ವಾಧೀನದಲ್ಲಿ ಇಲ್ಲದೇ ಇರುವವನು ಎಂದಿಗೂ ವಿಷ್ಣುಪಥವನ್ನು ಗಮ್ಯವನ್ನು ಸೇರಲಾರ. ಆದ್ದರಿಂದ ಮಾನವ ಜೀವನ ಗಮ್ಯವನ್ನು ತಲುಪಬೇಕಾದರೆ ಮನಸ್ಸು ಇಂದ್ರಿಯಗಳೂ ಮಾನವನ

ಸ್ವಾಧೀನದಲ್ಲಿ ಇರಬೇಕು. ಅವುಗಳನ್ನು ಹೇಗೆ ಸ್ವಾಧೀನದಲ್ಲಿಟ್ಟುಕೊಳ್ಳಬೇಕೋ ನೋಡೋಣ.

ಇಂದ್ರಿಯಗಳು ಅಂದರೆ ಐದು ಜ್ಞಾನೇಂದ್ರಿಯಗಳು. 1) ಕಣ್ಣುಗಳು 2) ಮೂಗು 3) ಕಿವಿಗಳು 4) ನಾಲಿಗೆ 5) ಚರ್ಮ. ಐದು ಕರ್ಮೇಂದ್ರಿಯಗಳು 1) ಬಾಯಿ 2) ಕೈಗಳು 3) ಕಾಲುಗಳು 4) ಶಿಶ್ನವು(ಪುರುಷಾಂಗ) 5) ಗುದಭಾಗ. ಇವೆಲ್ಲಾ ಮನಸಿನ ಅಧೀನದಲ್ಲಿ ಇರುತ್ತವೆ. ಮನಸ್ಸು ಹೇಗೆ ಹೇಳಿದರೆ ಹಾಗೆ ಕೆಲಸ ಮಾಡುತ್ತದೆ. ಆದ್ದರಿಂದ ಮುಂಚಿತವಾಗಿ ಮನಸ್ಸನ್ನು ನಮ್ಮ ಸ್ವಾಧೀನದಲ್ಲಿ ಇಟ್ಟುಕೊಳ್ಳಬೇಕು. ಮನಸ್ಸನ್ನು ಸ್ವಾಧೀನದಲ್ಲಿ ಇಟ್ಟುಕೊಳ್ಳಬೇಕಾದರೂ ಮನಸ್ಸಿನ ಚಂಚಲ ಸ್ವಭಾವ ಹೋಗಬೇಕಾದರೂ ಏಕೈಕ ಮಾರ್ಗ "ಶ್ವಾಸದ ಮೇಲೆ ಧ್ಯಾಸ" ಎನ್ನುವ ಧ್ಯಾನ. ಧ್ಯಾನದ ಮೂಲಕ ಇದನ್ನು ನಾವು ಸುಲಭವಾಗಿ ಸಾಧಿಸಬಹುದು. ಮನಸ್ಸನ್ನು ನಮ್ಮ ಅಧೀನದಲ್ಲಿ ಇಟ್ಟುಕೊಳ್ಳಬಹುದು.

ಮನಸ್ಸು ಚಂಚಲ ಸ್ಥಿತಿಯಲ್ಲಿ ಇದೆಯೋ? ಇಲ್ಲವೋ? ಎನ್ನುವುದನ್ನು ಸುಲಭವಾಗಿ ತಿಳಿದುಕೊಳ್ಳಬಹುದು. ಸ್ವಲ್ಪಹೊತ್ತು ಗತಕಾಲಕ್ಕೆ ಸಂಬಂಧಿಸಿದ ಆಲೋಚನೆಗಳೂ, ಸ್ವಲ್ಪಹೊತ್ತು ಭವಿಷತ್ತಿಗೆ ಸಂಬಂಧಿಸಿದ ಆಲೋಚನೆಗಳೂ, ಹೀಗೆ ಮನಸ್ಸು ಏನೋ ಒಂದನ್ನು ಯೋಚಿಸುತ್ತಾ ಇರುತ್ತದೆ. ಸ್ಥಿರವಾಗಿರುವುದಿಲ್ಲ. ಇದನ್ನೇ ಚಂಚಲ ಸ್ವಭಾವ ಎನ್ನುತ್ತಾರೆ. ಈ ಸ್ವಭಾವವನ್ನು ಧ್ಯಾನದಿಂದ ತೊಲಗಿಸಿಕೊಳ್ಳಬಹುದು.

ಹೇಗೆ ಎಂದರೆ ಧ್ಯಾನದಲ್ಲಿ ಕಣ್ಣುಗಳನ್ನು ಮುಚ್ಚಿಕೊಳ್ಳುತ್ತೇವೆ. ಹಾಗೆ ಮುಚ್ಚಿಕೊಂಡಾಗ ತಕ್ಷಣ ಆಲೋಚನೆಗಳು ಬರುತ್ತವೆ. ಆಲೋಚನೆಗಳು ಬಂದ ತಕ್ಷಣ ಭಯ ಪಡದೇ ಆಲೋಚನೆಗಳನ್ನು ನಿಲ್ಲಿಸಿ ಮನಸ್ಸನ್ನು ಪುನಃ ಶ್ವಾಸದ ಮೇಲೆ ಮರಳಿಸಬೇಕು. ಅಂದರೆ ಉಸಿರು ಹೊರಗೆ ಒಳಗೆ ಹೋಗುವ ರೀತಿಯನ್ನು ಗಮನಿಸುತ್ತಿರಬೇಕು. ಮನಸ್ಸು ಸ್ವಲ್ಪಹೊತ್ತು ಗಮನಿಸದೇ ಪುನಃ ಯಾವುದೋ ಒಂದು ಆಲೋಚಿಸುತ್ತಿರುತ್ತದೆ.ಆದರೂ ಪುನಃ ನಾವು ಮನಸ್ಸನ್ನು ಶ್ವಾಸದ ಮೇಲೆ ಮರಳಿಸಬೇಕು. ಹೀಗೆ ಮಾಡುತ್ತಾ ಮಾಡುತ್ತಾ ನಿಧಾನವಾಗಿ ಆಲೋಚನೆಗಳು ಕಡಿಮೆ ಆಗುತ್ತಾ ಇರುತ್ತವೆ. ಕಡಿಮೆ ಆಗುತ್ತಾ ಆಗುತ್ತಾ ನಮಗೆ ತಿಳಿಯದೇನೆ ಒಂದು ಸ್ಥಿತಿಯಲ್ಲಿ ಆಲೋಚನೆಗಳೆಲ್ಲಾ ನಿಂತುಹೋಗುತ್ತವೆ. ಹಾಗೆ ಆಲೋಚನೆಗಳೆಲ್ಲಾ ನಿಂತು ಹೋದ ಸ್ಥಿತಿಯೇ ಧ್ಯಾನಸ್ಥಿತಿ. ಅದೇ ಮನಸ್ಸು ಶಾಂತಿಯನ್ನು ಪಡೆದ ಸ್ಥಿತಿ. ಅದೇ ಮನಸ್ಸಿನ ಚಂಚಲತ್ವ ಹೋದಸ್ಥಿತಿ. ಅದೇ ಮನಸ್ಸು ನಿಮ್ಮ ಅಧೀನದಲ್ಲಿ ಬಂದಿರುವ ಸ್ಥಿತಿ.

ಅಂತಹ ಧ್ಯಾನ ಸ್ಥಿತಿಯಲ್ಲಿ ಅನೇಕ ಗಂಟೆಗಳ ಕಾಲ ಕುಳಿತುಕೊಂಡರೇ ನಿಮ್ಮ ಮನಸ್ಸು ನಿಮ್ಮ ಆಧೀನದಲ್ಲಿ ಪೂರ್ತಿಯಾಗಿ ಬಂದುಬಿಡುತ್ತದೆ. ಯಾವಾಗ ನಿಮ್ಮ ಮನಸ್ಸು ನಿಮ್ಮ ಅಧೀನದಲ್ಲಿ ಇರುತ್ತದೆಯೋ ನಿಮ್ಮ ಇಂದ್ರಿಯಗಳೂ ಸಹ ನಿಮ್ಮ ಅಧೀನದಲ್ಲಿ ಬರುತ್ತವೆ. ಕಣ್ಣುಗಳು ನೋಡು ಎಂದು ಹೇಳಿದ್ದನ್ನೇ ನೋಡುತ್ತವೆ. ಬಾಯಿ ಕೊಟ್ಟಿದ್ದನ್ನೇ (ತಿನಿಸಿದ್ದನ್ನೇ) ತಿನ್ನುತ್ತದೆ. ಮಾತು ಅಧೀನದಲ್ಲಿ ಇರುತ್ತದೆ. ಕಿವಿಗಳು ಕೇಳು ಎಂದಿದ್ದನ್ನೇ ಕೇಳುತ್ತವೆ. ಮೂಗು ಮೂಸಿನೋಡು ಎಂದು ಹೇಳಿದ್ದನ್ನೇ ಮೂಸಿನೋಡುತ್ತದೆ. ಸ್ಪರ್ಶ ಕೂಡ ಅಧೀನದಲ್ಲಿ ಇರುತ್ತದೆ. ಒಬ್ಬ ಹೆಂಡತಿಯೊಂದಿಗೆ ಸಂತೃಪ್ತಿ ಪಡುತ್ತಾನೆ. ಇತರರನ್ನು ನೋಡಿದರೂ ಆಕರ್ಷಿತನಾಗುವುದಿಲ್ಲ.

ಅಂತಹ ಸ್ಥಿತಿಯನ್ನು ಧ್ಯಾನದ ಮೂಲಕ ಸಂಪಾದಿಸಿದಾಗ ಒಳ್ಳೆಯ ಕುದುರೆಗಳಿಂದ

ರಾವುತ (ಕುದುರೆ ಸವಾರ) ಗಮ್ಯವನ್ನು ಸುಲಭವಾಗಿ ಹೇಗೆ ತಲುಪಬಲ್ಲನೋ ಮಾನವನೂ ಕೂಡ ತನ್ನ ಜೀವನದ ಗಮ್ಯವಾದ ವಿಷ್ಣು ಪಥವನ್ನು ಸುಲಭವಾಗಿ ಸಾಧಿಸಬಲ್ಲನೆಂದು ಬಾಬಾ ಅವರು ಸಂದೇಶ ನೀಡಿದರು.

**(8) ಮನಸ್ಸನ್ನು ಪಾವನಗೊಳಿಸುವುದು :–**

**"ಮಾನವನು ಪ್ರಪಂಚದಲ್ಲಿ ತನ್ನ ವಿಧಿ(ಕರ್ತವ್ಯ)ಗಳನ್ನು ತೃಪ್ತಿಯಾಗಿ, ಫಲಾಪೇಕ್ಷೆ ಇಲ್ಲದೇ ನಿರ್ವಹಿಸುತ್ತಿದ್ದರೆ ಆತನ ಮನಸ್ಸು ಪಾವನವಾಗುವುದಿಲ್ಲ. ಪಾವನವಾದ ಮನಸ್ಸಿನಲ್ಲೇ ವಿವೇಕವು (ಅಂದರೆ ಸತ್ಯವಾದದ್ದನ್ನು ಅಸತ್ಯವಾದದ್ದನ್ನು ಕಂಡುಕೊಳ್ಳುವುದು) ವೈರಾಗ್ಯ (ಅಸತ್ಯವಾದದ್ದರಲ್ಲಿ ಅಭಿಮಾನ ಇಲ್ಲದಿರುವುದು) ಮೊಳಕೆ ಒಡೆದು ಕ್ರಮೇಣ ಆತ್ಮಸಾಕ್ಷಾತ್ಕಾರಕ್ಕೆ ದಾರಿ ಆಗುತ್ತದೆ. ಅಹಂಕಾರವು ಹೋಗದೇ, ಲೋಭವು ನಶಿಸದೇ ಮನಸ್ಸು ಬಯಕೆಗಳನ್ನು ಬಿಡದೇ ಆತ್ಮಸಾಕ್ಷಾತ್ಕಾರಕ್ಕೆ ಅವಕಾಶವೇ ಇಲ್ಲ. ನಾನೇ ದೇಹ ಎಂದುಕೊಳ್ಳುವುದು ದೊಡ್ಡ ಭ್ರಮೆ ಈ ಅಭಿಪ್ರಾಯದಲ್ಲಿ ಅಭಿಮಾನದಲ್ಲಿರುವುದೇ ಬಂಧನಕ್ಕೆ ಕಾರಣ. ನೀನು ಆತ್ಮಸಾಕ್ಷಾತ್ಕಾರವನ್ನು ಆಕಾಂಕ್ಷಿಸಿದರೆ (ಬಯಸಿದರೆ) ಈ ಅಭಿಮಾನವನ್ನು ಬಿಡಬೇಕು"**

**ವಿವರಣೆ :–** ಬಾಬಾ ನೀಡಿರುವ ಸಂದೇಶದ ಪ್ರಕಾರ ಆತ್ಮಸಾಕ್ಷಾತ್ಕಾರವನ್ನು ಹೊಂದಬೇಕಾದರೆ ಮೊದಲು ಮನಸ್ಸು ಪವಿತ್ರವಾಗಬೇಕು. ಮನಸ್ಸು ಪವಿತ್ರವಾಗಬೇಕಾದರೆ ಮಾನವನು ತನ್ನ ಕೆಲಸಗಳನ್ನು ತೃಪ್ತಿಯಾಗಿ, ಫಲಾಪೇಕ್ಷೆ ಇಲ್ಲದೇ ಮಾಡಬೇಕು. ಅಂದರೆ ಯಾರಾದರೂ ಯಾವ ಕೆಲಸ ಮಾಡಿದರೂ ಪ್ರತಿಫಲವನ್ನು ಆಶಿಸದೇ ನಿಷ್ಕಲ್ಮಶವಾಗಿ ಮಾಡಬೇಕು.

ಅಂದರೆ ಯಾವ ಕೆಲಸಗಳಾದರೂ ಬಯಕೆಗಳಿಲ್ಲದೇ ಮಾಡಬೇಕು. ಅಷ್ಟೇ ವಿನಹ ನಾನು ಈ ಪೂಜೆ ಮಾಡಿದೆ, ನನಗೆ ಇದು ಪ್ರಸಾದಿಸು, ಈ ಭಜನೆ ಮಾಡಿದೆ, ನನ್ನ ಕಷ್ಟಗಳನ್ನು ತೊಲಗಿಸು, ನಾನು ಆರತಿ ಮಾಡಿದೆ, ನನ್ನ ರೋಗಗಳನ್ನು ವಾಸಿ ಮಾಡು, ನೈವೇದ್ಯ ಮಾಡಿದೆ, ನನ್ನ ಬಯಕೆಗಳನ್ನು ತೀರಿಸು, ಹುಂಡಿಯಲ್ಲಿ ದುಡ್ಡು (ಹಣವನ್ನು) ಹಾಕಿದೆ, ನನಗೆ ಧನ ವೃದ್ಧಿ ಆಗಲಿ, ಇವೆಲ್ಲಾ ಫಲಾಪೇಕ್ಷೆಯಿಂದ ಮಾಡುವುದೇ ಹಾಗೆ ಮಾಡುವುದರಿಂದ ಅಂದುಕೊಂಡದ್ದು ಆಗದಿದ್ದರೆ ಅಸಂತೃಪ್ತಿಗೆ ಒಳಗಾಗುತ್ತಾರೆ. ಇವೆಲ್ಲಾ ಮನಸ್ಸನ್ನು ಪಾವನಗೊಳಿಸಲಾರವೆಂದು ಬಾಬಾರವರ ಸಂದೇಶ.

ಆದ್ದರಿಂದ ನಾವು ಭಗವಂತನನ್ನು ಕೇಳಬೇಕಾದ ಅವಶ್ಯಕತೆ ಇಲ್ಲ. **"ಮಾಡಬೇಕಾದ್ದನ್ನು ಮಾಡಿದರೆ ಹೊಂದಬೇಕಾದ್ದನ್ನು ಹೊಂದುತ್ತೇವೆ"** ಎಂದು ತಿಳಿದುಕೊಂಡು **"ಒಳ್ಳೇ ಕರ್ಮಗಳನ್ನು ಮಾಡುವುದಕ್ಕೆ ಪ್ರಾಮುಖ್ಯತೆ ನೀಡಬೇಕೇ ವಿನಹ ಕೋರಿಕೆಗಳನ್ನು ಬಯಸುವುದಕ್ಕಲ್ಲ"** ಹಾಗೆ ಮಾಡುವುದರಿಂದ ಮನಸ್ಸು ಸಹ ಪಾವನವಾಗುತ್ತದೆ. ಅಷ್ಟೇ ಅಲ್ಲ "ಸಾತ್ವಿಕವಾದ ಸಸ್ಯಹಾರ ಮತ್ತು ಧ್ಯಾನ"ದ ಮೂಲಕ ಸಹ ತ್ವರಿತಗತಿಯಲ್ಲಿ ಮನಸ್ಸನ್ನು ಶುದ್ಧೀಕರಿಸಕೊಳ್ಳಬಹುದು. ಅಂದರೆ ಪವಿತ್ರಗೊಳಿಸಬಹುದು. ಹಾಗೇ ಮನೋಶುದ್ಧಿ ಆದಾಗ ಅವರಿಗೆ ವಿವೇಕ, ವೈರಾಗ್ಯ ಉಂಟಾಗುತ್ತದೆ. ಅದರಿಂದ ಯಾವುದು ನಿತ್ಯ? ಯಾವುದು ಅನಿತ್ಯ? ಅಂದರೆ ಯಾವುದು ಇರುವುದು? ಯಾವುದು ಮಾಯೆ? ಯಾವುದು ಸತ್ಯ? ಯಾವುದು ಅಸತ್ಯ? ಎನ್ನುವುದನ್ನು ತಿಳಿದುಕೊಳ್ಳಬಲ್ಲವರಾಗುತ್ತಾರೆ. ಭಗವಂತನು ನಿತ್ಯವಾದವನು. ಈ ಕಾಣಿಸುವ ಪ್ರಪಂಚವೆಲ್ಲಾ ಅನಿತ್ಯವಾದದ್ದೇ ಎನ್ನುವ ವಿಷಯ

ಅರ್ಥವಾಗುತ್ತದೆ. ಆಗ ಈ ಪ್ರಾಪಂಚಿಕ ವಿಷಯಗಳ ಮೇಲೆ ಅಂದರೆ ಅಸತ್ಯವಾದ ವಿಷಯ, ವಸ್ತುಗಳ ಮೇಲೆ ಅಭಿಮಾನ ಕುಗ್ಗುತ್ತದೆ. (ಕಡಿಮೆ ಆಗುತ್ತದೆ) ಅಂದರೆ ವೈರಾಗ್ಯ ಏರ್ಪಡುತ್ತದೆ. ಇವೆಲ್ಲಾ ಆತ್ಮಸಾಕ್ಷಾತ್ಕಾರಕ್ಕೆ ದಾರಿಮಾಡಿಕೊಡುತ್ತವೆ.

ಅಷ್ಟೇ ಅಲ್ಲದೆ ಬಾಬಾರವರು ಇನ್ನೂ ಏನು ಹೇಳಿದ್ದಾರೆಂದರೆ ನಾನು ಎನ್ನುವ ಅಹಂಕಾರ ಹೋಗಬೇಕೆಂದರು. ಲೋಭ ಅಂದರೆ ಯಾರಿಗೂ ಕೊಡದೆ ಬಚ್ಚಿಟ್ಟುಕೊಳ್ಳುವ ಗುಣ. ಅದರ ಜೊತೆ ಬಯಕೆಗಳು ಕೂಡ ಬಿಡಬೇಕೆಂದರು. ಇದರ ಜೊತೆ ಮುಖ್ಯವಾಗಿ ದೇಹವೇ ನಾನು ಎನ್ನುವ ಭಾವದಿಂದಲೇ ಜೀವಿಸುತ್ತಿದ್ದಾರೆ. ಏಕೆಂದರೆ ಯಾರು ಏನು ಮಾಡಿದರೂ ಎಲ್ಲಾ ದೇಹಕ್ಕಾಗಿಯೇ! ಸದಾ ದೇಹಾರೋಗ್ಯ, ದೇಹ ಸೌಂದರ್ಯ, ದೇಹ ಪೌಷ್ಠಿಕತೆ, ದೇಹಸುಖ, ದೇಹ ಅಲಂಕಾರ, ದೇಹಕ್ಕೆ ನೀಡುವ ಆಹಾರ, ಹೀಗೆ ದೇಹಕ್ಕಾಗಿ ತುಂಬಾ ಪ್ರಾಮುಖ್ಯತೆಯನ್ನು ಕೊಡುತ್ತಿದ್ದಾರೆ. ಈ ರೀತಿಯಲ್ಲಿ ದೇಹವನ್ನು ಪೋಷಿಸಬೇಕಾದರೆ ಮುಖ್ಯವಾಗಿ ಹಣಬೇಕು.

ಅದಕ್ಕಾಗಿ ದಿನದಲ್ಲಿ ಹೆಚ್ಚು ಸಮಯ ಹಣ ಸಂಪಾದನೆಗೆ ಮೀಸಲಾಗಿಸುತ್ತಿದ್ದಾರೆ. ಹಾಗೆ ದೇಹಭಾವದಿಂದ ದೇಹಕ್ಕೆ ಪ್ರಾಮುಖ್ಯತೆಯನ್ನು ನೀಡುತ್ತಾ, ದೇಹಕ್ಕಾಗಿಯೇ ಜೀವನವೆನ್ನುವ ಹಾಗೆ ತಾನು ದೇಹ ಎನ್ನುವ ಹಾಗೆ ಜೀವಿಸುತ್ತಿದ್ದಾರೆ. ಆದರೆ ಇರುವ ಸತ್ಯವೇನೆಂದರೆ! ನಾವೆಲ್ಲಾ ಆತ್ಮಗಳು ಅಷ್ಟೇ ವಿನಹ ದೇಹಗಳಲ್ಲ. ಆದ್ದರಿಂದ ದೇಹಾಭಿಮಾನವನ್ನು ತ್ಯಜಿಸಿ ಆತ್ಮಾಭಿಮಾನವನ್ನು ಬೆಳೆಸಿಕೊಳ್ಳಬೇಕು. ದೇಹದ ಕುರಿತು ಯೋಚಿಸುವುದಲ್ಲ. ಆತ್ಮವನ್ನು ಕುರಿತು ಯೋಚಿಸಬೇಕು. ದೇಹವನ್ನು ಕುರಿತು ಅಧ್ಯಯನ ಮಾಡುವುದಲ್ಲ, ಆತ್ಮನನ್ನು ಕುರಿತು ಅಧ್ಯಯನ ಮಾಡಬೇಕು. ದೇಹವನ್ನು ಕುರಿತು ಸಾಧನೆಗಳಲ್ಲ, ಆತ್ಮನನ್ನು ಕುರಿತು ಸಾಧನೆ ಮಾಡಬೇಕು. ಹಾಗೆ ಮಾಡಿದರೇನೇ ಆತ್ಮಸಾಕ್ಷಾತ್ಕಾರ ಹೊಂದಬಲ್ಲೆವು.

ದೇಹ ಸಾಧನೆಗಳು ಎಲ್ಲರಿಗೂ ತಿಳಿದಿದ್ದೆ, ವಾಕಿಂಗ್, ಜಾಗಿಂಗ್, ಎಕ್ಸರ್‌ಸೈಜ್, ಆಟಗಳು, ಯೋಗಾಸನಗಳು, ಪ್ರಕೃತಿ ಆಹಾರ ನಿಯಮಗಳು, ಮುಂತಾದ್ದೆಲ್ಲ ದೇಹ ಸಾಧನೆಗಳು. ಆದರೆ ಧ್ಯಾನ ಒಂದೇ ಆತ್ಮ ಸಾಧನೆ. ಆತ್ಮನನ್ನು ಪಡೆಯಲು ಮಾಡುವ ಸಾಧನೆ. ಆದ್ದರಿಂದ ಧ್ಯಾನ ಮಾಡುವವರಿಗೆ ದೇಹಾಭಿಮಾನ ಕಡಿಮೆ ಆಗುತ್ತದೆ. ದೇಹಾಭಿಮಾನ ಕಡಿಮೆ ಆಗುತ್ತಾ... ಆಗುತ್ತಾ... ಆತ್ಮಾಭಿಮಾನ ಹೆಚ್ಚಾಗುತ್ತದೆ. ಅಂತವರು ದೇಹ ಸಾಧನೆಗಳನ್ನು ತ್ಯಜಿಸಿ (ಬಿಟ್ಟು) ಆತ್ಮ ಸಾಧನೆ ಆಗಿರುವ ಧ್ಯಾನಕ್ಕೆ ಪ್ರಾಮುಖ್ಯತೆ ಕೊಡುತ್ತಾರೆ. ಅಂತಿಮವಾಗಿ ಆತ್ಮಸಾಕ್ಷಾತ್ಕರಿಸಿಕೊಳ್ಳುತ್ತಾರೆ.

**(9) ಗುರುವಿನ ಅವಶ್ಯಕತೆ :–**

**"ಆತ್ಮಜ್ಞಾನವು ತುಂಬಾ ಸೂಕ್ಷ್ಮವಾದದ್ದು ಮತ್ತು ನಿಗೂಢವಾದದ್ದು. ಯಾರಾದರೂ ಸರಿಯೇ ತಮ್ಮ ಸ್ವಂತ ಶಕ್ತಿಯಿಂದ ಅದನ್ನು ಹೊಂದಲಾರರು. ಆದ್ದರಿಂದ ಆತ್ಮಸಾಕ್ಷಾತ್ಕಾರವನ್ನು ಹೊಂದಿದ ಇನ್ನೊಬ್ಬರ (ಗುರುವು) ಸಹಾಯವು ತುಂಬಾ ಅವಶ್ಯಕ. ತುಂಬಾ ಕೃಷಿಮಾಡಿ (ಕಷ್ಟಪಟ್ಟು) ಶ್ರಮಿಸಿ ಇತರರು ಕೊಡಲಾರದ್ದನ್ನು ಸುಲಭವಾಗಿ ಗುರುವಿನಿಂದ ಹೊಂದಬಹುದು. ಅವರು ಆ ಮಾರ್ಗದ ಮೂಲಕ ನಡೆದಿರುವುದರಿಂದ ಶಿಷ್ಯನನ್ನು ಸುಲಭವಾಗಿ ಆಧ್ಯಾತ್ಮಿಕ**

**ಪ್ರಗತಿಯಲ್ಲಿ ಕ್ರಮಕ್ರಮವಾಗಿ ಒಂದು ಮೆಟ್ಟಿಲಿಂದ ಇನ್ನೊಂದು ಮೆಟ್ಟಿಲಿಗೆ ಕರೆದುಕೊಂಡು ಹೋಗಬಲ್ಲರು".**

ಬಾಬಾರವರು ಹೇಳಿದ ಈ ವಿಷಯ ಕೂಡ ತುಂಬಾ ಮುಖ್ಯವಾದದ್ದು. ಏಕೆಂದರೆ ಆತ್ಮಜ್ಞಾನ ತುಂಬಾ ಸೂಕ್ಷ್ಮವಾದದ್ದು, ನಿಗೂಢವಾದದ್ದೆಂದು ಬಾಬಾರವರು ಅನೇಕ ಬಾರಿ

ಹೇಳಿದ್ದಾರೆ. ಬಾಬಾ ಹೇಳಿದ ಪ್ರಕಾರ ತುಂಬಾ ಸೂಕ್ಷ್ಮಾತಿ ಸೂಕ್ಷ್ಮ ಎಂದು ತಿಳಿದುಕೊಳ್ಳಿ. ಅಂದರೆ ಆತ್ಮನನ್ನು ನೋಡಲಾರೆವು ಮಾನವನು ಇಂದ್ರಿಯಗಳಿಂದ ತಿಳಿದುಕೊಳ್ಳಲಾರ. ಆತ್ಮ ಕಾಣಿಸುವುದಿಲ್ಲ. ಕಿವಿಗಳಿಂದ ಕೇಳಲಾರೆವು. ಬಾಯಿಯಿಂದ ಹೇಳಲಾರೆವು. ಮೂಗು ಗ್ರಹಿಸಲಾರದು. ಚರ್ಮಸ್ಪರ್ಶಿಸಲಾರದು. ಆದ್ದರಿಂದ ಆತ್ಮನನ್ನು ಅರಿತುಕೊಳ್ಳುವುದು ಆತ್ಮಕ್ಕೆ ಸಂಬಂಧಿಸಿದ ಜ್ಞಾನ ಸಂಪಾದಿಸುವುದು ಅಷ್ಟು ಸುಲಭವಲ್ಲವೆಂದು ಬಾಬಾ ಹೇಳಿದ್ದಾರೆ. ಆದ್ದರಿಂದ ಅಷ್ಟು ಕಷ್ಟಕರವಾದ ಆತ್ಮನನ್ನು ತಿಳಿದುಕೊಳ್ಳಬೇಕಾದರೆ ಆ ಅನುಭವ ಇರುವ ಅಂದರೆ ಆತ್ಮಾನುಭವ ಹೊಂದಿದವರ ಸಹಾಯ ಮಾರ್ಗದರ್ಶನದ ಅವಶ್ಯಕತೆ ಇದೆ ಎಂದು ಬಾಬಾರವರು ಹೇಳಿದ್ದಾರೆ.

ಏಕೆಂದರೆ ಯಾರಾದರೂ ಗುರುವನ್ನು ಆರಿಸಿಕೊಳ್ಳುವುದರ ಮೇಲೆ ಅವರ ಭವಿಷ್ಯತ್ತು ಆಧಾರಪಟ್ಟಿರುತ್ತದೆ. ಮೇಲೆ ವೇಷ ನೋಡಿದರೇ ಎಲ್ಲರೂ ಗುರುಗಳ ಹಾಗೆ ಕಾಣುತ್ತಾರೆ. ಆದರೆ ನಿಜವಾದ ಗುರುಗಳು ಯಾರು? ಎನ್ನುವುದು ಅವರ ಜ್ಞಾನದಿಂದ ಮಾತ್ರ ತಿಳಿದುಕೊಳ್ಳಬಲ್ಲರು. ಇಲ್ಲವೇ ಶಿಷ್ಯನು ತನ್ನ ವಿವೇಕವನ್ನು ಉಪಯೋಗಿಸಬೇಕು. ಇಲ್ಲದಿದ್ದರೆ ಕಷ್ಟಗಳು ತಪ್ಪುವುದಿಲ್ಲ.

ಅನೇಕ ಜನ ಗುರುಗಳು ಶಿಷ್ಯರಿಗೆ ಇಷ್ಟವಾಗುವ ರೀತಿಯಲ್ಲಿ ಹೇಳುತ್ತಾರೆ. ಹಾಗೆ ಹೇಳಿ ಶಿಷ್ಯರಿಂದ ಬರುವ ಅವರ ಲಾಭವನ್ನು ನೋಡಿಕೊಳ್ಳುತ್ತಾರೆ. ಆದರೆ ಆತ್ಮಜ್ಞಾನವನ್ನು ಹೊಂದುವ ಮಾರ್ಗವನ್ನು ಬೋಧಿಸುವುದಿಲ್ಲ. ಅದಕ್ಕೆ ಯೋಗಿವೇಮನ ಅವರು ಹೀಗೆ ಹೇಳಿದರು.

**ಕಲ್ಲ ಗುರುಡು ಕಟ್ಟು ಕರ್ಮಚಯಂಬು**
**ಮಧ್ಯಮುಂಡು ಗಟ್ಟು ಮಂತ್ರಚಯಮು**
**ಉತ್ತಮುಂಡು ಗಟ್ಟು ಯೋಗ ಸಾಮ್ರಾಜ್ಯಮು**
**ವಿಶ್ವಧಾಮಿ ರಾಮ ವಿನುರವೇಮ.**

**ಭಾವಾರ್ಥ :-** ಮೋಸ ಮಾಡುವ ಸ್ವಭಾವ ಇರುವ ಗುರುವು (ಅಥವಾ ಧ್ಯಾನದ ಮಹಿಮೆ ತಿಳಿಯದ ಗುರುವು) ಪೂಜೆಗಳನ್ನು, ಭಜನೆಗಳನ್ನು, ಅಭಿಷೇಕಗಳನ್ನು, ಯಜ್ಞ-ಯಾಗಾದಿಗಳನ್ನು, ಮುಂತಾದ ಕರ್ಮಗಳನ್ನು ಮಾಡಿಸುತ್ತಾನೆ. ಮಧ್ಯಮ ವರ್ಗದ ಗುರುವು ಕಿವಿಯಲ್ಲಿ ನಾಮವನ್ನೋ, ಮಂತ್ರವನ್ನೋ, ಬೋಧಿಸಿ ಜಪಗಳನ್ನು ಮಾಡಿಸುತ್ತಾನೆ. ಆದರೆ ಉತ್ತಮ ಗುರುವು ಧ್ಯಾನವನ್ನು ಮಾಡಿಸಿ ಯೋಗ ಸಾಮ್ರಾಜ್ಯವಾದ ಆತ್ಮಸಾಕ್ಷಾತ್ಕಾರವನ್ನು ಉಂಟುಮಾಡಿಸುತ್ತಾನೆ ಎಂದು ವೇಮನ (ತೆಲುಗುಕವಿ) ಹೇಳಿದರು.

ಆದ್ದರಿಂದ ಉತ್ತಮ ಗುರುವನ್ನು ಕುರಿತು ಸ್ವಲ್ಪ ತಿಳಿದುಕೊಳ್ಳೋಣ. 'ಗು' ಅಂದರೆ 'ಅಜ್ಞಾನ' 'ರು' ಅಂದರೆ 'ಜ್ಞಾನ' "ಅಜ್ಞಾನಾಂದಕಾರಸ್ಯ ಜ್ಞಾನಾಂಜ (ನ) ಶಲಾಕಯ ಚಕ್ಷುರಂ ಮಿಲಿತಂ ಏನತಸ್ಯೈ ಶ್ರೀ ಗುರುವೇ ನಮಃ" ಅಂದರೆ ನಮ್ಮಲ್ಲಿರುವ

ಅಜ್ಞಾನಾಂಧಕಾರವನ್ನು ಹೋಗಲಾಡಿಸಿ ಜ್ಞಾನವನ್ನು ನೀಡುವವರೇ ಗುರುವು. ಆದರೆ ಗುರುವು ಜ್ಞಾನಿ ಆಗಿರಬೇಕು. ಜ್ಞಾನವೆಂದರೆ ವಿಷಯ ಪರಿಜ್ಞಾನ. ಪಾಂಡಿತ್ಯವಲ್ಲ. ಗುರುವು ಸ್ವಯಂ ಪ್ರತಿಭೆ, ಸ್ವಪ್ರಜ್ಞೆ, ಇದ್ದವರಾಗಿರಬೇಕು. ಗುರುವು ಬ್ರಹ್ಮಾನುಭೂತಿಯ ರುಚಿ ನೋಡಿದವನಾಗಿರಬೇಕು. ತನ್ನ ಶಕ್ತಿಯಿಂದ ಭವಬಂಧನಗಳನ್ನು ಬಿಡಿಸಬಲ್ಲವನಾಗಿರಬೇಕು.

ಅಷ್ಟೇ ಅಲ್ಲ ಯಾವ ತಾತ್ವಿಕ ವಿಷಯವನ್ನಾದರೂ ತಡವರಿಸದೇ, ಯೋಚಿಸದೇ ವಿವರಿಸಿ ಹೇಳಲಾಗಬೇಕು. ಅವರಿಗೆ ಆ ವಿಷಯಗಳು ಅದಕ್ಕೂ ಮುಂಚೆ ತಿಳಿಯದೇ ಇರಬಹುದು. ಸಂದರ್ಭಾನುಸಾರವಾಗಿ ಅವರಿಗೆ ಹೊಳೆಯುತ್ತದೆ. ಅದೇ ಪ್ರಜ್ಞಾ ವಿಶೇಷ. ಎಲ್ಲಾ (ಸಮಸ್ತ) ಸಂಶಯಗಳೂ ಬುಡಸಮೇತ (ಸಮೂಲವಾಗಿ) ನಿರ್ಮೂಲಿಸಿ ಮರಣಭಯವನ್ನು ಹೋಗಲಾಡಿಸಿ ಸಂಸಾರ ಬಂಧದಿಂದ ಹೊರ ಬರುವ ಮೋಕ್ಷ ಮಾರ್ಗವನ್ನು ತೋರಿಸಲಾಗಬೇಕು. ಅಂತವರನ್ನೇ ಸದ್ಗುರುಗಳು ಎನ್ನುತ್ತಾರೆ. ಅಥವಾ ಪರಮ ಗುರುಗಳು ಎನ್ನುತ್ತಾರೆ.

ಸತ್ಯವಾದ ಬ್ರಹ್ಮವು ಮನಸ್ಸನ್ನು ದಾಟಿದ ನಂತರ ಮಾತ್ರವೇ ಸ್ಪಷ್ಟವಾಗಿ ಕಂಡುಬರುತ್ತದೆ. ಮನಸ್ಸಿನಿಂದ ಅದನ್ನು ತಿಳಿಯಲಾಗುವುದಿಲ್ಲ. ಬ್ರಹ್ಮ ನಿರ್ಗುಣ, ನಿರಾಮಯ, ನಿರಂಜನ. ಅದ್ದರಿಂದ ಅದನ್ನು ತಿಳಿದುಕೊಳ್ಳಲು ಜ್ಞಾನ ಒಂದೇ ಸಾಲದು. ಪ್ರಜ್ಞೆ ಬೇಕು. ಅದು ಸದ್ಗುರುಗಳಿಂದಲೇ ಸಾಧ್ಯ. ಅವರು ಹೇಳಿಕೊಡುವ ಸಾಧನೆಯಿಂದಲೇ ಸಾಧ್ಯ.

ಸಾಧಕನು 'ರೂಪಧ್ಯಾನ' ಬಿಟ್ಟು 'ಅರೂಪಸ್ಥಿತಿ'ಗೆ ತಲುಪಿ ನಿರ್ಗುಣೋಪಾಸನೆ ಮಾಡಿ ರೂಪಾತೀತವಾದ ಪರಬ್ರಹ್ಮ ತತ್ವವನ್ನು ಗ್ರಹಿಸಬೇಕಾದರೇ ಗುರುವೂ ತುಂಬಾ ಸಹಕರಿಸುತ್ತಾರೆ. ಅದಕ್ಕೆ ಬಾಬಾರವರು ಸದ್ಗುರುವನ್ನು ಆಶ್ರಯಿಸಿ ಎಂದು ಹೇಳಿದ್ದಾರೆ.

ಆದ್ದರಿಂದ ಗುರುವನ್ನು ಆಯ್ಕೆ ಮಾಡುವುದಕ್ಕೂ ಮುಂಚೆ ಶಿಷ್ಯನು ಜಾಗ್ರತೆಯನ್ನು ವಹಿಸಬೇಕು. ನಾನು ತುಂಬಾ ದೊಡ್ಡವನು, ನಾನು ತುಂಬಾ ಶಕ್ತಿವಂತನು, ನಾನು ಅದು ಕೊಡುತ್ತೇನೆ, ಇದು ಕೊಡುತ್ತೇನೆ ಎಂದು ಉತ್ತಮ ಗುರುವು ಹೇಳುವುದಿಲ್ಲ. ನೀನು ನನ್ನ ಶಿಷ್ಯನಾಗು ಎಂದು ಯಾವ ಉತ್ತಮ ಗುರುವೂ ಬಯಸಲ್ಲ. ಸಾಧಕನೇ ಗುರುಗಳನ್ನು ಆರಿಸಿಕೊಳ್ಳಬೇಕು.

**(10) ಭಗವಂತನ ಕಟಾಕ್ಷ :–**

**"ಇದು ಎಲ್ಲದಕ್ಕಿಂತ ತುಂಬಾ ಅವಶ್ಯಕವಾದದ್ದು. ಭಗವಂತನು ತನ್ನ ಕೃಪೆಗೆ ಪಾತ್ರರಾದವರಿಗೆ ವಿವೇಕವನ್ನು, ವೈರಾಗ್ಯವನ್ನು, ಉಂಟುಮಾಡಿ ಸುರಕ್ಷಿತವಾಗಿ ಭವಸಾಗರದಿಂದ ಮುಕ್ತಿಕೊಡಿಸಬಲ್ಲನು. (ಬಿಡುಗಡೆ ಮಾಡಬಲ್ಲನು) ವೇದಾಭ್ಯಾಸ ಮಾಡುವುದರಿಂದಾಗಲಿ, ಮೇಧಾಶಕ್ತಿಯಿಂದಾಗಲಿ, ಪುಸ್ತಕ ಜ್ಞಾನದಿಂದಾಗಲಿ, ಆತ್ಮಾನುಭೂತಿಯನ್ನು ಹೊಂದಲಾರರು. ಆತ್ಮ ಯಾರನ್ನು ವರಿಸುವುದೋ ಅವರೇ ಅದನ್ನು ಹೊಂದಬಲ್ಲರು. ಅಂತವರಿಗೆ ಆತ್ಮ ತನ್ನ ಸ್ವರೂಪವನ್ನು ತಿಳಿಯಪಡಿಸುವುದೆಂದು ಕಠೋಪನಿಷತ್ತು ಹೇಳುತ್ತದೆ".**

**ವಿವರಣೆ :–** ಮುಖ್ಯವಾಗಿ ಬಾಬಾ ಹೇಳಿದ್ದು ಏನೆಂದರೆ ಪಂಡಿತರು ಓದಿದ ಹಾಗೆ ವೇದಗಳನ್ನು ಓದಿದರೂ, ಪಂಡಿತರಲ್ಲಿ ಪಂಡಿತರು ಅಂದರೆ ವೇದಗಳಿಗೆ ಅರ್ಥವನ್ನು

ವಿವರಿಸಿ ಹೇಳಬಲ್ಲವನಾದಂತಾ ಮೇಧಾಶಕ್ತಿ ಇರುವವರಾಗಲಿ ಪುಸ್ತಕಗಳನ್ನು ನೋಡಿ ನಿರರ್ಗಳವಾಗಿ ಉಪನ್ಯಾಸಗಳನ್ನು ಹೇಳಲಾಗುವವನಾಗಲಿ, ಒಂದು ರೀತಿಯಲ್ಲಿ ಪುಸ್ತಕಗಳ ಮೂಲಕ ಭಗವಂತನನ್ನು ಕುರಿತು ಎಷ್ಟು ತಿಳಿದುಕೊಂಡರೂ ಆತ್ಮಾನುಭೂತಿಯನ್ನು ಹೊಂದಲಾರರೆಂದು ಬಾಬಾ ಹೇಳಿದ್ದಾರೆ. ಅವರು ಇನ್ನೂ ಏನು ಹೇಳಿದ್ದಾರೆಂದರೆ "ಆತ್ಮ ಯಾರನ್ನು ವರಿಸುವುದೋ ಅವರೇ ಆತ್ಮನನ್ನು ಹೊಂದಬಲ್ಲರು" ಅಂದರೆ **"ಭಗವಂತನು ಯಾರನ್ನು ಇಷ್ಟ ಪಡುತ್ತಾನೋ ಅವರೇ ಆತ್ಮರೂಪಿ ಭಗವಂತನನ್ನು ಹೊಂದಬಲ್ಲರು ಅಂದರೆ ಯಾರೆಂದರೆ ಭಗವಂತನಿಗೆ ಇಷ್ಟವೋ ಅವರೇ ಭಗವಂತನನ್ನು ಸೇರಬಲ್ಲರು".**

ತಾವು ಭಕ್ತರು ಎಂದುಕೊಳ್ಳುವವರು ಈ ವಿಷಯವನ್ನು ತುಂಬಾ ಜಾಗ್ರತೆಯಿಂದ (ಹುಷಾರಾಗಿ) ಆಲೋಚಿಸಬೇಕು. ಏಕೆಂದರೆ ಅನೇಕರು ಹೇಳುತ್ತಿರುತ್ತಾರೆ ಬಾಬಾ ಅಂದರೆ ನನಗೆ ತುಂಬಾ ಇಷ್ಟ ಎಂದು. ಆದರೆ ಬಾಬಾಗೆ ತಾವು ಇಷ್ಟವಾದರೋ? ಇಲ್ಲವೋ? ಯೋಚಿಸುವುದಿಲ್ಲ. ಆದರೆ ಇದು ತುಂಬಾ ಮುಖ್ಯ ಏಕೆಂದರೆ "ಇವರಿಗೆ ಬಾಬಾ ಇಷ್ಟವಾದ ಮಾತ್ರಕ್ಕೆ ಪ್ರಯೋಜನವಿಲ್ಲ. ಬಾಬಾಗೆ ಇವರೆಂದರೆ ಇಷ್ಟವಾಗಬೇಕು". ಆಗಲೇ ಅವರ ಜೀವನ ಧನ್ಯವಾಗುತ್ತದೆ. ಅವರೇ ಬಾಬಾ ಕೃಪೆಗೆ ಪಾತ್ರರಾಗುತ್ತಾರೆ. ಅಂತವರಿಗೆ ವಿವೇಕವನ್ನು, ವೈರಾಗ್ಯವನ್ನು, ಕಲ್ಪಿಸಿ ಸುರಕ್ಷಿತವಾಗಿ ಭವಸಾಗರದಿಂದ ಅಂದರೆ ಈ ದುಃಖಗಳಿಂದ ಮುಕ್ತಿಗೊಳಿಸಬಲ್ಲರು. ಅಂದರೆ ದಾಟಿಸಬಲ್ಲರು ಎಂದು ಹೇಳಲಾಗಿದೆ.

ಇನ್ನೂ ಯೋಚಿಸಿರಿ ಭಕ್ತರು ಅನೇಕ ಜನ ಇರುತ್ತಾರೆ. ಆದರೆ ಭಗವಂತನಿಗೆ ಇಷ್ಟವಾದವರೇ ನಿಜವಾದ ಭಕ್ತರು. ಅದಕ್ಕೆ ಹೇಳುತ್ತಾರೆ ನಾನು ಬಾಬಾ ಭಕ್ತನು ಎಂದು ತಿಳಿದಿರುವವರು ಮಹಾವ್ಯಕ್ತಿಗಳಲ್ಲ. (ದೊಡ್ಡವರಲ್ಲ) ಇವನು ನನ್ನ ಭಕ್ತನು ಎಂದು ಬಾಬಾಗೆ ಅನಿಸಬೇಕು. ಅಂತವರೇ ದೊಡ್ಡವರು. ನಿಜವಾದ ಭಕ್ತರು. ನಮ್ಮನ್ನು ಭಗವಂತ ಇಷ್ಟಪಡಬೇಕಾದರೂ ಭಗವಂತನ ದೃಷ್ಟಿಯಲ್ಲಿ ನಾವು ಭಕ್ತರಾಗಬೇಕೆಂದರೆ ಏನು ಮಾಡಬೇಕು? ನಾವು ಏನು ಮಾಡುವುದರಿಂದ ಭಗವಂತನ ಪ್ರೀತಿಗೆ ಪಾತ್ರರಾಗುತ್ತೇವೆ ಎನ್ನುವುದನ್ನು ತಿಳಿದುಕೊಳ್ಳೋಣ.

ಈ ವಿಷಯವೇ 16–17ನೇ ಅಧ್ಯಾಯಗಳಲ್ಲಿ 131ನೇ ಪುಟದಲ್ಲಿ ಬಾಬಾರವರು ಹೇಳಲಾಗಿದೆ. **"ನನ್ನ ಖಜಾನೆ ತುಂಬಿ ತುಳುಕುತ್ತಿದೆ. ಯಾರಿಗೆ ಏನು ಬೇಕೋ ಅವರಿಗೆ ಅದು ನೀಡಬಲ್ಲೆ, ಆದರೆ ಅವರಿಗೆ ಪಡೆಯುವ ಯೋಗ್ಯತೆ ಇದೆಯಾ? ಇಲ್ಲವಾ? ಎಂದು ನಾನು ಮೊದಲು ಪರೀಕ್ಷಿಸಬೇಕು. ನಾನು ಹೇಳಿದ್ದನ್ನು ಜಾಗ್ರತೆಯಿಂದ (ಹುಷಾರಾಗಿ) ಕೇಳಿಸಿಕೊಂಡರೆ ನಿಮಗೆ ಖಂಡಿತ ಒಳ್ಳೆಯದಾಗುತ್ತದೆ. ಈ ಮಸೀದಿಯಲ್ಲಿ ಕುಳಿತುಕೊಂಡು ನಾನು ಎಂದಿಗೂ ಅಸತ್ಯವನ್ನು ಹೇಳುವುದಿಲ್ಲ".**

ಇದರಿಂದ ತಿಳಿಯುವುದೇನೆಂದರೆ ಭಗವಂತನು ಏನು ಬೇಕಾದರೂ ಕೊಡಬಲ್ಲ ಆದರೆ ಬಯಸಿದವರಿಗಲ್ಲ, ಅಲ್ಪವಾದ ಕಾಣಿಕೆಗಳನ್ನು ಸಮರ್ಪಿಸುವವರಿಗಲ್ಲ, ಭಗವಂತನಿಂದ ಏನು ಪಡೆಯಬೇಕಾದರೂ ಯೋಗ್ಯತೆ ಅಂದರೆ ಅರ್ಹತೆಯ ಅವಶ್ಯಕತೆ ಇದೆ. ಯೋಗ್ಯತೆಯನ್ನು ಸಂಪಾದಿಸದೇ ಎಷ್ಟು ಆರಾಧನೆಗಳನ್ನು ಮಾಡಿದರೂ ಪ್ರಯೋಜನವಿಲ್ಲ. ಆದ್ದರಿಂದ ಏನು ಹೊಂದಬೇಕಾದರೂ ಬಾಬಾ ಹೇಳಿದ ಹಾಗೆ ಅದಕ್ಕೆ ಬೇಕಾದ

ಯೋಗ್ಯತೆಯನ್ನು ಸಂಪಾದಿಸಿಕೊಳ್ಳಬೇಕು. ಅದು ತುಂಬಾ ಮುಖ್ಯ. ಅವನಿಗೆ ಆ ಅರ್ಹತೆ ಇದೆಯಾ? ಇಲ್ಲವಾ? ಎಂದು ಅಂತವರೇ ಅವುಗಳನ್ನು ಹೊಂದಲು ಅರ್ಹರೆಂದು ಬಾಬಾ ಸಂದೇಶದ ಮೂಲಕ ನಾವು ತಿಳಿದುಕೊಳ್ಳಬಲ್ಲೆವು. ಆದ್ದರಿಂದ ಪ್ರತಿ ಒಬ್ಬರೂ ತಾವು ಬಯಸಿದ್ದು ಪಡೆಯಬೇಕಾದರೆ ಎಂತಹ ಅರ್ಹತೆ ಸಂಪಾದಿಸಬೇಕೋ ತಿಳಿದುಕೊಳ್ಳಬೇಕು. ಮತ್ತೊಂದು ಬಾರಿ ತಿಳಿದುಕೊಳ್ಳಿ. **"ಕೋರುವುದು (ಬಯಸುವುದು) ಮುಖ್ಯ ಅಲ್ಲ. ಅರ್ಹತೆ ಮುಖ್ಯ"**. ಹಾಗೆಯೇ ಆತ್ಮಸಾಕ್ಷಾತ್ಕಾರಕ್ಕೆ ಕೂಡ ಭಗವಂತನ ಕೃಪೆಯ ಅವಶ್ಯಕತೆ ಇದೆ. ಆ ಕೃಪೆ ಯಾರಿಗೆ ಸಿಗುತ್ತದೆ ಎಂದರೆ ಭಗವಂತನಿಗೆ ಇಷ್ಟವಾದವರಿಗೆ ಮಾತ್ರವೇ ಸಿಗುತ್ತದೆ. ಭಗವಂತನಿಗೆ ಯಾರೆಂದರೆ ಇಷ್ಟ? ಅಂದರೆ ಭಗವದ್ಗೀತೆಯಲ್ಲಿ ಶ್ರೀ ಕೃಷ್ಣ ಭಗವಾನನು ಹೇಳಿದ ಈ ಕೆಳಗಿನ ಶ್ಲೋಕಗಳನ್ನು ನೋಡೋಣ.

ಶ್ಲೋ॥ **ಚತುರ್ವಿಧಾ ಭಜನ್ತೇ ಮಾಂ ಜನಾಸ್ಸುಕೃತಿ ನೋರ್ಜುನ**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ (ಭ,ಗೀ,7–16)**

ಶ್ಲೋ॥ **ತೇಷಾಂ ಜ್ಞಾನೀ ನಿತ್ಯಯುಕ್ತ ಏಕ ಭಕ್ತಿರ್ವಿಶಿಷ್ಯತೇ**
**ಪ್ರಿಯೊ ಹಿ ಜ್ಞಾನಿನೋತ್ಯರ್ಥಮಹಂ ಸಚಮಮ ಪ್ರಿಯ (ಭ,ಗೀ,7–17)**

ಭಾವಾರ್ಥ :– ಭರತವಂಶ ಶ್ರೇಷ್ಟನಾದ ಓ ಅರ್ಜುನಾ! ಆಪತ್ತು ಬಂದಾಗ ಆರ್ತನಾದವನ್ನು ಮಾಡುವವರು, ಹಣವನ್ನು ಆಶಿಸುವವರು, ಭಗವಂತನನ್ನು ತಿಳಿದುಕೊಳ್ಳಬೇಕೆನ್ನುವ ಆಸಕ್ತಿ ಇರುವವರು, ಆತ್ಮಜ್ಞಾನ ಇರುವವರು ಎನ್ನುವ ನಾಲಕ್ಕೂ ಬಗೆಯ ಜನರು ನನ್ನನ್ನು ಸೇವಿಸುತ್ತಿದ್ದಾರೆ. ಅದರಲ್ಲಿ 'ಜ್ಞಾನಿ' ಶ್ರೇಷ್ಟನು. ಅಂತಹ 'ಜ್ಞಾನಿಗೆ' ನಾನು ಪ್ರಿಯನೇ ಅವನು ಕೂಡ ನನಗೆ ಹೆಚ್ಚು ಪ್ರಿಯನು.

ಮೇಲೆ ಹೇಳಿರುವ ಶ್ಲೋಕಗಳಿಂದ ತಿಳಿಯುವುದೇನೆಂದರೆ ನಾಲಕ್ಕು ಬಗೆಯ ಭಕ್ತರಲ್ಲಿ ಅಂದರೆ ಕಷ್ಟಗಳನ್ನು ತೊಲಗಿಸಿ ಎಂದು ಪೂಜೆಗಳೂ, ಭಜನೆಗಳೂ, ಪ್ರಾರ್ಥನೆಗಳೂ, ಮಾಡುತ್ತಾ ಆರ್ತನಾದಗಳನ್ನು ಮಾಡುವ 'ಆರ್ತ' ಕ್ಕಿಂತಾ! ಅಂತಹದನ್ನೇ ಮಾಡುತ್ತಾ ಧನ ಸಂಪತ್ತನ್ನು ಪ್ರಸಾದಿಸಿ ಎಂದು ಬಯಸುವ ಅರ್ಥಾರ್ಥಿಗಳಿಗಿಂತಾ ಭಗವಂತನನ್ನು ತಿಳಿದುಕೊಳ್ಳಬೇಕೆಂಬ ಜಿಜ್ಞಾಸೆಯಿಂದ ಶಾಸ್ತ್ರಗಳನ್ನು ಅಧ್ಯಾಯನ ಮಾಡುವ ಪಂಡಿತರಿಗಿಂತಾ ಕೂಡಾ 'ಧ್ಯಾನ' ದಿಂದ ಆತ್ಮಜ್ಞಾನವನ್ನು ಸಂಪಾದಿಸಿಕೊಳ್ಳಬೇಕೆನ್ನುವ 'ಜ್ಞಾನಿ'ಯೇ ನನಗೆ ಪ್ರಿಯನು ಎಂದು ಭಗವಂತನು ಹೇಳಿದ್ದಾನೆ. ಅಂದರೆ ಭಕ್ತರಿಗಿಂತಾ ಧ್ಯಾನ ಮಾಡುವವನೇ ನನಗೆ ಪ್ರಿಯನೆಂದು ಸ್ಪಷ್ಟವಾಗಿ ಶ್ರೀ ಕೃಷ್ಣ ಭಗವಂತನು ಹೇಳಿದ್ದಾನೆ.

ಮೇಲೆ ಹೇಳಿರುವ ಸಂದೇಶಾನುಸಾರ ಭಗವಂತನಿಗೆ 'ಆತ್ಮಜ್ಞಾನಿಗಳೇ' ಪ್ರಿಯರೆಂದು ನಾವು ತಿಳಿದುಕೊಳ್ಳಬಹುದು. ಆದ್ದರಿಂದ ಜ್ಞಾನ ಸಂಪಾದಿಸಿಕೊಳ್ಳಲು ಪ್ರಯತ್ನಿಸಬೇಕು. ಜ್ಞಾನ ಎನ್ನುವುದು ಧ್ಯಾನದಿಂದ ಮಾತ್ರವೇ ಸಿಗುತ್ತದೆ.(ಬರುತ್ತದೆ). ಅದಕ್ಕೆ ಬಾಬಾರವರು ಕೂಡಾ ನವವಿಧ ಭಕ್ತರಲ್ಲಿ 9ನೇಯದಾದ 'ಆತ್ಮನಿವೇಧನೆ'ಯೇ ನನಗೆ ಇಷ್ಟ ಎಂದರು.

ಹಾಗೆ ಬ್ರಹ್ಮಜ್ಞಾನ ಹೊಂದಲು ಬೇಕಾಗಿರುವ ವಿಷಯಗಳಲ್ಲಿ ಬ್ರಹ್ಮಜ್ಞಾನವನ್ನು ನೀಡಿ(ಪ್ರಸಾದಿಸಿ) ಎಂದು ಕೋರಿದ ಒಬ್ಬ ಧನಿಕ ಭಕ್ತನನ್ನು ಉದ್ಧೇಶಿಸಿ ಅಲ್ಲಿರುವವರಿಗೆಲ್ಲಾ ಬಾಬಾ ಹೇಳಿದ್ದಾರೆ. ಇವೆಲ್ಲಾ ವಿವರವಾಗಿ ಆಧುನಿಕ ಭಕ್ತನಿಗೆ ಹೇಳಿ ಅದರ ಸಾರಾಂಶವನ್ನು ಪುನಃ (130ನೇ ಪುಟದಲ್ಲಿ) ಈ ರೀತಿ ಬಾಬಾ ಹೇಳಿದರು. **"ನಿನ್ನ ಅತ್ಯಾಸೆ, ಲೋಭವನ್ನು**

**ಪೂರ್ತಿಯಾಗಿ ಬಿಡುವವರೆಗೂ ನೀನು ನಿಜವಾದ ಬ್ರಹ್ಮನನ್ನು ನೋಡಲಾರೆ, ಯಾರ ಮನಸ್ಸು ಧನ(ಹಣ)ದಲ್ಲಿ, ಸಂತಾನದಲ್ಲಿ, ಐಶ್ವರ್ಯದಲ್ಲಿ, ಲಗ್ನವಾಗಿದೆಯೋ! ಅವನು ಆ ಅಭಿಮಾನವನ್ನು ಹೋಗಿಸಿಕೊಳ್ಳದವರೆಗೂ ಬ್ರಹ್ಮತತ್ವವನ್ನು ಹೇಗೆ ಪಡೆಯಬಲ್ಲನು"?**

**"ಅಭಿಮಾನ ಎನ್ನುವ ಭ್ರಮೆ, ಹಣದಲ್ಲಿ, ದೃಷ್ಟಿ (ಬಯಕೆ) ದುಃಖ ಎನ್ನುವ ಸುಳಿಯಂತದ್ದು. ಅದು ಅಸೂಯೆ, ಅಹಂಭಾವ ಎನ್ನುವ ಮೋಸಗಳಿಂದ ತುಂಬಿದೆ. ಯಾರಿಗೆ ಬಯಕೆಗಳಿಲ್ಲವೋ ಅವನು ಮಾತ್ರವೇ ಈ ಸುಳಿಯನ್ನು ದಾಟಬಲ್ಲನು. ದುರಾಸೆ–ಬ್ರಹ್ಮಜ್ಞಾನವು ಉತ್ತರ, ದಕ್ಷಿಣ ಧೃವಗಳಿದ್ದಂತೆ. ಅವು ಶಾಶ್ವತವಾಗಿ ಒಂದಕ್ಕೊಂದು ಬದ್ಧ ವೈರಿಗಳಂತವು".**

ಬಾಬಾ ಇನ್ನೂ ಹೀಗೆ ಹೇಳಿದ್ದಾರೆ (131) **"ಎಲ್ಲಿ ದುರಾಸೆ ಇದೆಯೋ ಅಲ್ಲಿ ಬ್ರಹ್ಮನನ್ನು ಕುರಿತು ಆಲೋಚಿಸುವುದಕ್ಕಾಗಲಿ, ಅದರ ಧ್ಯಾನಕ್ಕಾಗಲಿ, ಅವಕಾಶವಿಲ್ಲ. ಹೀಗಿರುವಾಗ ದುರಾಸೆ ಇರುವವನು ವಿರಕ್ತಿಯನ್ನು ಮೋಕ್ಷವನ್ನು ಹೇಗೆ ಸಂಪಾದಿಸಬಲ್ಲನು? ಲೋಭಿಗೆ ಸಂತೃಪ್ತಿ ಆಗಲಿ, ಧೃಡ ನಿಶ್ಚಯವಾಗಲಿ ಇರುವುದಿಲ್ಲ. ಮನಸ್ಸಿನಲ್ಲಿ ಸ್ವಲ್ಪವಾದರೂ ದುರಾಶೆ ಇದ್ದರೆ ಸಾಧನೆಗಳೆಲ್ಲಾ ಅಂದರೆ ಆಧ್ಯಾತ್ಮಿಕ ಪ್ರಯತ್ನಗಳೆಲ್ಲಾ ನಿಷ್ಪ್ರಯೋಜನ"** ಎಂದು ಹೇಳಿದ್ದಾರೆ.

ಬಾಬಾ ಇನ್ನೂ ಹೀಗೆ ಹೇಳಿದ್ದಾರೆ **"ಯಾರು ಫಲಾಪೇಕ್ಷೆ ರಹಿತನಲ್ಲವೋ! ಯಾರು ಫಲಾಪೇಕ್ಷಕಾಂಕ್ಷೆಯನ್ನು ಬಿಡುವುದಿಲ್ಲವೋ! ಯಾರಿಗೆ ಅವನಲ್ಲಿ ವಿರಕ್ತಿ ಇಲ್ಲವೋ! ಅಂತವನು ದೊಡ್ಡ ವಿಧ್ಯಾವಂತನಾದರೂ ಅವನ ಜ್ಞಾನ ನಿಷ್ಪ್ರಯೋಜನ. ಆತ್ಮಸಾಕ್ಷಾತ್ಕಾರ ಹೊಂದಲು ಅದು ಅವನಿಗೆ ಸಹಾಯವಾಗುವುದಿಲ್ಲ".**

ಬಾಬಾ ಇನ್ನೂ ಹೀಗೆ ಹೇಳಿದ್ದಾರೆ **"ಯಾರು ಅಹಂಕಾರಪೂರಿತರೋ, ಯಾರು ಇಂದ್ರಿಯ ವಿಷಯಗಳನ್ನು ಕುರಿತು ಸದಾ ಚಿಂತಿಸುತ್ತಿರುವರೋ, ಅವರಿಗೆ ಗುರು ಬೋಧನೆಗಳು ನಿಷ್ಪ್ರಯೋಜನ. ಆದ್ದರಿಂದ ಮನಸ್ಸನ್ನು ಪವಿತ್ರಗೊಳಿಸುವುದು ತುಂಬಾ ಅವಶ್ಯವಾದದ್ದು".**

ಹೀಗೆ ಬಾಬಾ ಆತ್ಮಸಾಕ್ಷಾತ್ಕಾರಕ್ಕೆ ಬೋಧಿಸಿದ ವಿಷಯಗಳು ಸೂಕ್ಷ್ಮವಾಗಿ ಮತ್ತೊಂದು ಬಾರಿ ವಿವರಿಸಿ ಮನಸ್ಸನ್ನು ಪವಿತ್ರಗೊಳಿಸಿರಿ ಎಂದು ಹೇಳಿದ್ದಾರೆ. ಮನಸ್ಸನ್ನು ಪವಿತ್ರಗೊಳಿಸುವ ಏಕೈಕ ಮಾರ್ಗ ಧ್ಯಾನ. ಅಂದರೆ "ಶ್ವಾಸದ ಮೇಲೆ ಧ್ಯಾಸ" ಆದ್ದರಿಂದ ಯಾರು ಧ್ಯಾನ ಮಾಡುತ್ತಾರೊ ಅವರು ಬಾಬಾ ಹೇಳಿದ ಹಾಗೆ ಜೀವಿಸಬಲ್ಲರು. ಹೇಳಿದ್ದನ್ನೆಲ್ಲಾ ಸಾಧಿಸಬಲ್ಲರು.

ಮುಖ್ಯವಾಗಿ ಆತ್ಮಸಾಕ್ಷಾತ್ಕಾರಕ್ಕೆ ಧ್ಯಾನ ಅತ್ಯಂತ್ಯ ಅವಶ್ಯಕವೆಂದು ಬಾಬಾ ಹೇಳಿದ್ದಾರೆ. (18–19 ಅಧ್ಯಾಯಗಳಲ್ಲಿ 143ನೇಯ ಪುಟದಲ್ಲಿ) ಬಾಬಾ ಹೇಳಿರುವ ವಿಷಯ ಒಂದು ಬಾರಿ ನೋಡೋಣ.

**"ಆತ್ಮಸಾಕ್ಷಾತ್ಕಾರಕ್ಕೆ ಧ್ಯಾನದ ಅವಶ್ಯಕತೆ ಇದೆ. ಅದನ್ನು ಅಭ್ಯಸಿಸಿದರೆ ಪ್ರತಿದಿನ ಧ್ಯಾನ ಮಾಡುವುದನ್ನು ಅಭ್ಯಾಸ ಮಾಡಿ ಚಿತ್ತವೃತ್ತಿಗಳೆಲ್ಲಾ ಶಾಂತಿಸುವುದು, ಬಯಕೆಗಳೆಲ್ಲಾ ಬಿಟ್ಟು ನಿಷ್ಕಾಮಕರ್ಮಿಯಾಗಿ, ನೀವು ಸಮಸ್ತ ಜೀವರಾಶಿಯಂದು ಇರುವ ಭಗವಂತನನ್ನು ಧ್ಯಾನಿಸಿ. ಮನಸ್ಸು ಏಕಾಗ್ರವಾದರೆ ಲಕ್ಷ್ಯ ಪೂರ್ತಿಯಾಗುತ್ತದೆ. (ನೆರವೇರುತ್ತವೆ) ಸದಾ ನನ್ನ ನಿರಾಕಾರ ಸ್ವಭಾವವನ್ನು ಧ್ಯಾನಿಸಿ. ಅದೇ ಜ್ಞಾನ ಸ್ವರೂಪ, ಚೈತನ್ಯ, ಆನಂದ".**

ಮೇಲೆ ಹೇಳಿರುವ ಸಂದೇಶದ ಪ್ರಕಾರ ಬಾಬಾ ಸಮಸ್ತ ಜೀವಿಗಳಲ್ಲಿ ಇರುವ

ಭಗವಂತನನ್ನು ಅಂದರೆ ಆತ್ಮನನ್ನು ಧ್ಯಾನಿಸಿ ಎಂದರು. ಅಷ್ಟೇ ಅಲ್ಲ ಈ ಧ್ಯಾನವನ್ನು ಯಾವ ಬಯಕೆಗಳೂ ಇಲ್ಲದೇ ಅಂದರೆ ಪ್ರತಿಫಲ ಆಶಿಸದೇ ಮಾಡಿ ಎಂದರು. ಹಾಗೆ ಮಾಡುವುದರಿಂದ ಲಕ್ಷ್ಯ ನೆರವೇರುತ್ತದೆ ಎಂದು ಹೇಳಿದ್ದಾರೆ. ಅವರು ಇನ್ನೂ ತನ್ನ ನಿರಾಕಾರ ಸ್ವಭಾವ ಅಂದರೆ ಆತ್ಮನನ್ನು ಧ್ಯಾನಿಸಿ ಎಂದರು. ಹಾಗೆ ಆತ್ಮನನ್ನು ಧ್ಯಾನಿಸುವ ಮಾರ್ಗವೇ "ಶ್ವಾಸದ ಮೇಲೆ ಧ್ಯಾಸ" ಅವರು ಇನ್ನೂ ಹೇಳಿದ್ದೇನೆಂದರೆ **"ನೀವು ಧ್ಯಾನ ಮಾಡಲಾಗದಿದ್ದರೆ ರಾತ್ರಿ ಹಗಲು ನೀವು ನೋಡುತ್ತಿರುವ ನನ್ನ ಈ ಆಕಾರವನ್ನು ಧ್ಯಾನಿಸಿ. ಹಾಗೆ ಕೆಲವು ದಿನಗಳು ಮಾಡಿದಾಗ ನಿಮ್ಮ ವೃತ್ತಿಗಳೆಲ್ಲಾ ಕೇಂದ್ರೀಕೃತವಾಗುವುದು".**

ಬಾಬಾ ನಿರಾಕಾರ ಸ್ವಭಾವವನ್ನು ಧ್ಯಾನಿಸಲು ತಿಳಿಯದೇ ಇರುವವರು ಪ್ರಾರಂಭದಲ್ಲಿ ಅವರು ಸಾಕಾರ ರೂಪವನ್ನು ಧ್ಯಾನಿಸಿ ಎಂದರು. ಅದು ಕೂಡಾ ಕೆಲವು ದಿನಗಳು ಮಾತ್ರವೇ. ಹಾಗೆ ಮಾಡುತ್ತಾ ಮಾಡುತ್ತಾ ನಿಧಾನವಾಗಿ ಬಾಬಾ ನಿರಾಕಾರ ಸ್ವಭಾವ ಅಂದರೆ ಆತ್ಮನನ್ನು ಧ್ಯಾನಿಸಬೇಕು. ಬಾಬಾ ಇನ್ನೂ ಏನೆಂದರೆಂದರೆ ಹಾಗೆ ಮಾಡಿದರೆ **"ಧ್ಯಾನ (ಧ್ಯಾನ ಮಾಡುವವನು) "ಧ್ಯಾನ ಧ್ಯೇಯ, (ಆತ್ಮ) ಈ ಮೂರಕ್ಕೂ ಇರುವ ವ್ಯತ್ಯಾಸ ಹೋಗಿ ಧ್ಯಾನಿಸುವವನು ಚೈತನ್ಯ (ಆತ್ಮ)ದಲ್ಲಿ ಐಕ್ಯವಾಗಿ ಬ್ರಹ್ಮತತ್ವದ ಜೊತೆ ಅಭಿನ್ನವಾಗುತ್ತದೆ".** ಅಂದರೆ ಬಾಬಾನಲ್ಲಿ ಐಕ್ಯವಾಗುತ್ತಾರೆ. ಅಂದರೆ ಆತ್ಮಸಾಕ್ಷಾತ್ಕಾರವನ್ನು ಹೊಂದುತ್ತಾರೆ ಎಂದು ಅರ್ಥ. ಇದೇ ವಿಷಯ 43–44ನೇ ಅಧ್ಯಾಯದಲ್ಲಿ 323ನೇ ಪುಟದಲ್ಲಿ ಕೂಡಾ ಬಾಬಾ ಹೇಳಿದ್ದಾರೆ.




**"ಯಾರು ಸರ್ವಸ್ವ ಶರಣಾಗತಿ ಯಲ್ಲಿದ್ದು ನನ್ನನ್ನೇ ಧ್ಯಾನಿಸುವರೋ ಅವರಿಗೆ ನಾನು ಋಣಗ್ರಸ್ಥನು. ಅವರಿಗೆ ಮೋಕ್ಷವನ್ನು ಕೊಟ್ಟು ಅವರ ಋಣವನ್ನು ತೀರಿದು ಕೊಳ್ಳುತ್ತೇನೆ.**

**ಯಾರು ನನ್ನನ್ನೇ ಚಿಂತಿಸುತ್ತಾ ನನ್ನ ಕುರಿತೇ ಧೀಕ್ಷೆಯಿಂದ ಇರುವರೋ ಯಾರು ನನಗೆ ಅರ್ಪಿಸದೆ (ಅಂದರೆ ಯಾವ ಜೀವಿಗಾದರೂ) ತಿನ್ನುವುದಿಲ್ಲವೋ, ಅಂತವರ ಮೇಲೆ ನಾನು ಆಧಾರಪಟ್ಟು ಇರುವೆನು. ಯಾರು ನನ್ನ ಸನ್ನಿಧಾನಕ್ಕೆ (ದೇಹವಿಲ್ಲದ ಆತ್ಮದ ಹತ್ತಿರಕ್ಕೆ) ಬರುವರೋ ಅವರು ನದಿ ಸಮುದ್ರದಲ್ಲಿ ಬೆರೆತ ಹಾಗೆ ನನ್ನಲ್ಲಿ ಲೀನವಾಗುತ್ತಾರೆ. ಆದ್ದರಿಂದ ನೀವು ಸರ್ವವೂ ಅಹಂಕಾರವನ್ನು ಸ್ವಲ್ಪವೂ ಇಲ್ಲದೇ ನನ್ನ ಹೃದಯದಲ್ಲಿ ಇರುವ ನನ್ನನ್ನು ಸರ್ವವೂ ಶರಣಾಗತಿ ಮಾಡಬೇಕು". "ನಾನು ಅಂದರೆ ಯಾರು? ನಾನು ಅಂದರೆ**

**ಸಾಯಿಬಾಬಾ ಅನೇಕ ಬಾರಿ ಬೋಧಿಸಿದ್ದಾರೆ. ಅವರು ಹೀಗೆ ಹೇಳಿದರು. "ನನ್ನನ್ನು ಹುಡುಕಲು ನೀವು ಎಲ್ಲೋ ದೂರ ಹೋಗಬೇಕಾಗಿಲ್ಲ.**

**ನಿನ್ನ ನಾಮವನ್ನು, ನಿನ್ನ ಆಕಾರವನ್ನು, ಬಿಟ್ಟರೆ ನಿನ್ನಲ್ಲೇ ಅಲ್ಲದೇ ಎಲ್ಲಾ ಜೀವಿಗಳಲ್ಲೂ ಚೈತನ್ಯ ಅಥವಾ ಅಂತರಾತ್ಮ ಎನ್ನುವುದು ಒಂದು ಇದೆ. "ಅದೇ ನಾನು" ಇದನ್ನು ನೀನು ಗ್ರಹಿಸಿ ನಿನ್ನಲ್ಲೇ ಅಲ್ಲದೇ ಎಲ್ಲದರಲ್ಲೂ ನನ್ನನ್ನು ವೀಕ್ಷಿಸು. ಇದನ್ನು ನೀವು ಅಭ್ಯಾಸಿಸಿದರೆ ಸರ್ವವ್ಯಾಪಕತ್ವವನ್ನು ಅನುಭವಿಸಿ ನನ್ನಲ್ಲಿ ಐಕ್ಯವಾಗುವೆ".**

ನಿರಾಕಾರ ಸ್ವಭಾವವಾದ ಆತ್ಮನನ್ನು ಧ್ಯಾನಿಸಬೇಕೆನ್ನುವವರು "ಶ್ವಾಸದ ಮೇಲೆ ಧ್ಯಾಸ"ವನ್ನು ಇಟ್ಟರೆ ಸುಲಭವಾಗಿ ಆಲೋಚನೆಗಳನ್ನು ಕಡಿಮೆಮಾಡಿಕೊಳ್ಳಬಲ್ಲರು. ಮನಸ್ಸನ್ನು ಶೂನ್ಯಗೊಳಿಸಬಲ್ಲರು. ಮನಸ್ಸಿಗೆ ಅತೀತವಾದ ಆತ್ಮಸ್ಥಿತಿಗೆ ತಲುಪುತ್ತಾರೆ.

ಆದ್ದರಿಂದ ಪ್ರತಿಯೊಬ್ಬರೂ ಧ್ಯಾನ ಮಾಡಿ. ಬಾಬಾ ಗುಡಿಗಳಲ್ಲಿರುವ ಧ್ಯಾನ ಮಂದಿರಗಳನ್ನು ಉಪಯೋಗಿಸಿಕೊಳ್ಳಿ. ಹೆಚ್ಚು ಸಮಯ ಬಾಬಾರ (ಆತ್ಮ) ಮೇಲೆ ದೃಷ್ಟಿ ಇಡಿ. ದುಃಖದಿಂದ ತಾತ್ಕಾಲಿಕವಾಗಿಯೇ ಅಲ್ಲ ಶಾಶ್ವತವಾಗಿ ಹೊರ ಬನ್ನಿ.

•

ಧ್ಯಾನ ಎಂದರೆ ಶ್ವಾಸದ ಮೇಲೆ ಗಮನ
ನಿಮ್ಮಲ್ಲಿರುವ ದೈವವನ್ನು ಧ್ಯಾನಿಸಿರಿ.

ಮತ್ತೊಂದು ಬಾರಿ ನೆನಪಿಟ್ಟುಕೊಳ್ಳಿ
**"ಬಾಬಾ ಎಲ್ಲಿ ನಾನು ಎಂದು ಹೇಳಿದರೂ ತಕ್ಷಣ**
**ಆತ್ಮ ಎಂದು ತಿಳಿದುಕೊಳ್ಳಿ".**



# ಈಶಾವಾಶ್ಯೋಪನಿಷತ್
## – ಬಾಬಾ ವಿವರಣೆ

ಈಶಾವಾಶ್ಯ ಉಪನಿಷತ್‌ನಲ್ಲಿರುವ ಒಂದು ವಾಕ್ಯಕ್ಕೆ ಅರ್ಥ ಸರಿಯಾಗಿ ಅರ್ಥವಾಗದೇ ಶಿಷ್ಯರು ತಳ – ಮಳಗೊಳ್ಳುತ್ತಿದ್ದರೆ ಶಿರಡಿ ಬಾಬಾ ಅವರು ಅದ್ಭುತವಾಗಿ ಅದಕ್ಕೆ ವಿವರಣೆ ನೀಡಿದರು. ಅದು ಒಂದು ಸಲ ನೋಡೋಣ.

**ಶ್ಲೋ॥ "ಈಶಾವಾಶ್ಯಮಿದಂ ಸತ್ಯಂ ಯತ್ಕಿಂಚಿತ ಜಗತ್ಯಾಂಜಗತ್"**

**ಭಾವಾರ್ಥ :–** ಅಖಿಲ ಬ್ರಹ್ಮಾಂಡದಲ್ಲಿರುವ ಜಡ, ಚೈತನ್ಯ ಸ್ವರೂಪಗಳೆಲ್ಲಾ ಈಶ್ವರನಿಂದ ವ್ಯಾಪಿಸಿಕೊಂಡಿವೆ. ಅಂದರೆ ಸ್ತೆ ಪೂರ್ಣ ಈ ಸೃಷ್ಟಿಯಲ್ಲಿರುವ ಜಡ ಅಂದರೆ ಕದಲಿಕೆ ಇಲ್ಲದ್ದು, ಚೈತನ್ಯ ಎಂದರೆ ಕದಲಿಕೆಗಳಿರುವ ರೂಪಗಳೆಲ್ಲಾ ಪರಬ್ರಹ್ಮನಿಂದ ವ್ಯಾಪಿಸಲ್ಪಟ್ಟಿವೆ ಎಂದು ಬಾಬಾರವರು ವಿವರಿಸಿದರು. ಇದನ್ನೇ ಭಗವದ್ಗೀತೆಯಲ್ಲಿ

ಶ್ಲೋ॥ **ಮಯೊತತ ಮಿದಂ ಸರ್ವಂ ಜಗದವ್ಯಕ್ತ ಮೂರ್ತಿನಾ!**
**ಮತ್‌ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ಟವಸ್ಥಿತಃ (ಭ,ಗೀ,9–10)**

**ಭಾವಾರ್ಥ :–** ನಾನು ನನ್ನ ಅವ್ಯಕ್ತ ರೂಪದಿಂದ ಈ ಜಗತ್ತನ್ನೆಲ್ಲಾ ವ್ಯಾಪಿಸಿದ್ದೇನೆ. ಸಮಸ್ತ ಪ್ರಾಣಿಕೋಟಿಗಳು ನನ್ನಲಿವೆ. ನನಗೆ ಅವು ಆಧಾರವಲ್ಲ.

ಬಾಬಾ ಇನ್ನೂ ಏನು ಹೇಳಿದರೆಂದರೆ ಈ ಉಪನಿಷತ್ತಿನಲ್ಲಿರುವ ಶಾಂತಿ ಮಂತ್ರವು ಈ ವಿಷಯವನ್ನೇ ಬೋಧಿಸುತ್ತದೆ. ಅದೇ ವಿಷಯವನ್ನು ಶ್ರೀಕೃಷ್ಣಪರಮಾತ್ಮ ಭಗವದ್ಗೀತೆಯಲ್ಲಿ ಕೂಡಾ ಹೇಳಿದ್ದಾರೆ ಎಂದು ತಿಳಿಸಿದರು.

ಶ್ಲೋ॥ **ಓಮ್ ಪೂರ್ಣಮದಃ ಪೂರ್ಣಮಿದಂ, ಪೂರ್ಣಾತ್ ಪೂರ್ಣ ಮುದಚ್ಯತೇ!**
**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾ ವಷಿಷ್ಯತೇ!!**

**ಭಾವಾರ್ಥ :–** ಈ ಪರಬ್ರಹ್ಮ ಪೂರ್ಣವೇ, ಈ ಜಗತ್ತು ಕೂಡಾ ಪೂರ್ಣವೇ ಪೂರ್ಣ ಪರಬ್ರಹ್ಮನಿಂದಲೇ ಈ ಪೂರ್ಣ ಜಗತ್ತು ಉತ್ಪನ್ನವಾಗಿದೆ. ಆದ್ದರಿಂದ ಪೂರ್ಣ ಪರಬ್ರಹ್ಮನಿಂದ ಜಗತ್ತಿನ ಕಲ್ಪನೆ ಅಳಿಸಿಹಾಕಿದರೂ ಪೂರ್ಣಪರಬ್ರಹ್ಮವೇ ಉಳಿದಿರುತ್ತದೆ ಎಂದು ಹೇಳುತ್ತಾ ಅವರು ಹೀಗೆ ವಿವರಿಸಿದರು.

ಇದರ ಅರ್ಥ ಎಲ್ಲಾ ಬ್ರಹ್ಮವೇ ಎಲ್ಲದರಲ್ಲೂ ಇರುವುದು ಬ್ರಹ್ಮವೇ. ಆದ್ದರಿಂದ ನಾನು, ನನ್ನದು, ಎನ್ನುವ ಭಾವನೆ ಪೂರ್ತಿಯಾಗಿ ಬಿಡಬೇಕು. ಯಾವುದರ ಮೇಲೂ ಅಭಿಮಾನವನ್ನು ಬೆಳೆಸಿಕೊಳ್ಳಬಾರದು. ಎಂದು ಬಾಬಾರವರು ಹೇಳುತ್ತಾ ಎಲ್ಲಾ ಪರಬ್ರಹ್ಮನದೇ ಆದ್ದರಿಂದ ಯಾರಿಗೆ ಏನು ಸಿಕ್ಕಿದರೂ! ಇಲ್ಲದಿದ್ದರೂ! ಅದು ಈಶ್ವರನಿಂದಲೇ ಸಿಕ್ಕಿದೆ

ಎಂದು ತಿಳಿದುಕೊಳ್ಳಬೇಕು. ಆದ್ದರಿಂದ ಈಶ್ವರನಿಂದ ಲಭಿಸಿದ ಐಶ್ವರ್ಯವನ್ನು ತ್ಯಾಗ ಪೂರ್ವಕವಾಗಿ ಅನುಭವಿಸಬೇಕು, ಹಂಚಬೇಕು. ಯಾವ ವಿಧವಾದ ಲೋಭವನ್ನು, ಮೋಹವನ್ನು ಇಟ್ಟುಕೊಳ್ಳಬಾರದು ಎಂದು ಶಿರಡಿ ಬಾಬಾ ವಿವರಣೆ ನೀಡಿದರು. ಹಾಗೆ ಹೇಳುತ್ತಾ ಅವರು ಈಶಾವಾಶ್ಯ ಉಪನಿಷತ್‌ನಲ್ಲಿರುವ ಈ ಕೆಳಗಿನ ಶ್ಲೋಕವನ್ನು ಹೇಳಿದರು.

**"ತೇನತ್ಯಕ್ತೇನ ಭುಂಜಥಾಮಾಗ್ರುಧಃ ಕಸ್ಯಸ್ವಿದ್ ಧನಂ" (ಓ 81–97)**

ಹಾಗೆಯೇ ಭಗವದ್ಗೀತೆಯಲ್ಲಿರುವ ಈ ಕೆಳಗಿನ ಶ್ಲೋಕ ಕೂಡಾ ವಿವರಿಸಿದರು.

**ಶ್ಲೋ॥ ಸಮಂ ಸರ್ವೇಷು ಭೂತೇಷು ತಿಷ್ಠನ್ತಂ ಪರಮೇಶ್ವರಮ್**
**ವಿನಶ್ಯತ್ಸ್ವವಿನಶ್ಯನ್ತಂ ಮಃ ಪಶ್ಯತಿ ಸಪಶ್ಯತಿ (ಭ,ಗೀ,13–28)**

**ಭಾವಾರ್ಥ :–** ಪರಮೇಶ್ವರನು ಎಲ್ಲಾ ಪ್ರಾಣಿಗಳ ಅಂತಃಕರಣದಲ್ಲಿ ಒಂದೇ ವಿಧವಾಗಿ ಇದ್ದಾನೆ. ಆ ಪ್ರಾಣಿಗಳ ದೇಹಾದಿಗಳು ನಶಿಸಿದರೂ, ನಶಿಸಿಲ್ಲವೆಂಬಂತೆ ಯಾರು ನೋಡುತ್ತಿದ್ದಾರೋ ಅವರೇ ನಿಜವಾದ ನೋಡುವವರಾಗುವರು.

ಇದರಿಂದ ಮಾನವನು ತನಗೆ ಏನು ಸಿಕ್ಕಿದೆಯೋ ಅದರಲ್ಲೇ ತೃಪ್ತಿಯಿಂದ ಇರಬೇಕು. ಈ ಸೃಷ್ಟಿಯಿಂದ ಯಾರಿಗೆ ಏನು ಸಿಕ್ಕಿದರೂ ಅದು ಎಲ್ಲರಿಂದ, ಎಲ್ಲರಿಗಾಗಿ ಎಂದು ಅರ್ಥಮಾಡಿಕೊಳ್ಳಬೇಕು. ಎಲ್ಲರಿಗೂ ಹಂಚಬೇಕು. ಯಾವುದನ್ನು ಬಚ್ಚಿಟ್ಟುಕೊಳ್ಳಬಾರದೆಂದು ಬಾಬಾರವರ ಸಂದೇಶ (ಕೊಟ್ಟಿದ್ದು ನಮಗೆ ಬಚ್ಚಿಟ್ಟದ್ದು ಪರರಿಗೆ ಎನ್ನುವ ಗಾದೆ ನೆನಪಿನಲ್ಲಿದೆ ಅಲ್ಲವೇ) ಆದರೆ ಈ ಲೋಕದಲ್ಲಿ ಮಾನವರು ಇರುವುದನ್ನು ಹಂಚದೇ ಬಚ್ಚಿಟ್ಟುಕೊಳ್ಳುವುದಲ್ಲದೇ ದೋಚಿಕೊಳ್ಳುತ್ತಾ ಇನ್ನೂ, ಇನ್ನೂ ಕೊಡಿ ಎಂದು ಬಾಬಾರವರನ್ನು ಪ್ರಾರ್ಥಿಸುತ್ತಾರೆ. ಭಜನೆಗಳನ್ನು ಮಾಡುತ್ತಾರೆ. ಅಂದರೆ ಬಾಬಾರವರು ಹೇಳುವುದು ಒಂದು, ಭಕ್ತರು ಮಾಡುವುದು ಇನ್ನೊಂದು. ಅದಕ್ಕೆ ಎಲ್ಲರ ಜೀವನಗಳು ಹಾಗಿವೆ. ಆದ್ದರಿಂದ ಯಾರಿಗಾದರೂ ಲಾಭ ಉಂಟಾಗಬೇಕಾದರೆ ಬಾಬಾರವರ ಸಂದೇಶವನ್ನು ಅರ್ಥಮಾಡಿಕೊಂಡು ಅದಕ್ಕೆ ಅನುಗುಣವಾಗಿ ಪ್ರವರ್ತಿಸಬೇಕು. ಈ ಸೃಷ್ಟಿಯಲ್ಲಿರುವವರೆಲ್ಲಾ ಒಂದೇ! ಎಲ್ಲಾ ಒಂದೇ! ಎಲ್ಲಾ ಪರಬ್ರಹ್ಮಸ್ವರೂಪವೆಂದು ತಿಳಿದುಕೊಳ್ಳಬೇಕು. ಕೊನೆಗೆ ಪ್ರಾಣಿಗಳೂ ಕೂಡಾ! ಅದಕ್ಕಾಗಿ ಜೀವ ಹಿಂಸೆಮಾಡಬಾರದು. ಮಾಂಸಭಕ್ಷಣೆ ಮಾಡಬಾರದು. ಬಯಸಬಾರದು! ಇರುವುದರಲ್ಲಿ ತೃಪ್ತಿಯನ್ನು ಹೊಂದಬೇಕು! ಹಂಚಬೇಕು!

ಹಾಗೆ ಮಾಡಿದರೇನೆ ಬಾಬಾ ಹೇಳಿದ್ದು ಅರ್ಥಮಾಡಿಕೊಂಡ ಹಾಗೆ. ಅವರು ಅಂದರೆ ಇಷ್ಟಪಡುವವರು ಅವರು ಹೇಳಿದ ಹಾಗೆ ನಡೆದುಕೊಳ್ಳಬೇಕು. ಅಂತವರೆಂದರೇನೆ ಬಾಬಾ ಅವರಿಗೆ ತುಂಬಾ ಇಷ್ಟ.

●



# ಸಬ್‌ಕಾ ಮಾಲಿಕ್ ಏಕ್ ಹೈ

ಶಿರಡಿ ಬಾಬಾ ಅವರು ಈ ವಾಕ್ಯವನ್ನು ಪದೇ ಪದೇ ಹೇಳುತ್ತಿರುತ್ತಾರೆ. ಬಾಬಾರವರು ಯಾವ ವಿಷಯವನ್ನು ಹೇಳಿದರೂ ಅದರಲ್ಲಿ ತುಂಬಾ ಅರ್ಥವಿರುತ್ತದೆ.

ಅಂತರಾರ್ಥವಿರುತ್ತದೆ. ದೊಡ್ಡ ವಿಷಯವನ್ನು ಚಿಕ್ಕ ವಾಕ್ಯದಲ್ಲಿ ಹೇಳುತ್ತಾರೆ. ವಿಶೇಷವಾದ ವಿಷಯವನ್ನು ಸೂಕ್ಷ್ಮವಾಗಿ ಹೇಳುತ್ತಾರೆ. ಹಾಗೆ ಅವರು ಸೂಕ್ಷ್ಮವಾಗಿ ಹೇಳಿದ್ದಕ್ಕೆ ವಿಶೇಷ ಅರ್ಥವನ್ನು ತಿಳಿದುಕೊಂಡು ಆಚರಿಸುವವರು ಧನ್ಯರು.

"ಸಬ್‌ಕಾ ಮಾಲಿಕ್ ಏಕ್ ಹೈ" ಅಂದರೆ ಎಲ್ಲಾದಕ್ಕೂ ಅಂದರೆ ಎಲ್ಲರಿಗೂ ಯಜಮಾನ ಒಬ್ಬನೇ! ಅಂದರೆ ಅಖಿಲ ಬ್ರಹ್ಮಾಂಡದಲ್ಲಿರುವ ಜಡ, ಚೈತನ್ಯ, ಸ್ವರೂಪಗಳೆಲ್ಲಾ ಅಂದರೆ ಈ ಸೃಷ್ಟಿಯಲ್ಲಿರುವ ಚರ, ಅಚರಗಳಿಗೆಲ್ಲಾ ಯಜಮಾನ ಒಬ್ಬನೇ! ಎಂದು ಅರ್ಥ.

ಸಹಜವಾಗಿ ಯಜಮಾನ ಎಂದು ಯಾರನ್ನು ಅನ್ನುತ್ತೇವೆ? ಯಾರಾದರೂ ಏನಾದರೂ ನಿರ್ಮಿಸಿಕೊಂಡರೂ ಸೃಷ್ಟಿಸಿಕೊಂಡರೂ ಅದಕ್ಕೆ ಅವರು ಯಜಮಾನ ಅನ್ನುತ್ತೇವೆ. ಹಾಗೆ ಯಾರಾದರೂ ಒಂದು ಮನೆ ನಿರ್ಮಿಸಿಕೊಂಡರೆ ಅದಕ್ಕೆ ಅವರು ಯಜಮಾನ ಆಗುತ್ತಾರೆ. ಎಲ್ಲರೂ ಏನೆನ್ನುತ್ತಾರೆಂದರೆ ಆ ಮನೆಯ ಯಜಮಾನ ಅವನು ಕಣೋ! ಎನ್ನುತ್ತಾರೆ. ಹಾಗೆಯೇ ಯಾರಾದರೂ ಒಂದು ವ್ಯಾಪಾರ ಸಂಸ್ಥೆಯನ್ನು ಸ್ಥಾಪಿಸಿಕೊಂಡರೆ ಅದಕ್ಕೆ ಅವನನ್ನು ಯಜಮಾನ ಎನ್ನುತ್ತೇವೆ. ಹಾಗೆಯೇ ಒಂದು ಇಂಡಸ್ಟ್ರೀಯನ್ನು ಸ್ಥಾಪಿಸಿಕೊಂಡರೂ, ಒಂದು ಎಸ್ಟೇಟು ಏರ್ಪಾಡು ಮಾಡಿಕೊಂಡರೂ, ಅವನ್ನು ನಿರ್ಮಿಸಿಕೊಂಡರೂ ಅವರನ್ನು ಯಜಮಾನ ಎನ್ನುತ್ತೇವೆ. ಹಾಗೆಯೇ ಯಾರಾದರೂ ಒಂದು ರಾಜ್ಯವನ್ನು ಸ್ಥಾಪಿಸಿದರೆ ಆ ರಾಜ್ಯಕ್ಕೆ ಅವರು ಯಜಮಾನರಾಗುತ್ತಾರೆ. ಅವರನ್ನು ರಾಜ ಎಂದೂ ಸಹ ಎನ್ನುತ್ತೇವೆ.

ಹಾಗೆ ಯಾರು ಏನು ಸೃಷ್ಟಿಸಿಕೊಂಡರೂ ಅಂದರೆ ನಿರ್ಮಿಸಿಕೊಂಡರು ಏರ್ಪಾಟು ಮಾಡಿಕೊಂಡರೂ, ಸ್ಥಾಪಿಸಿಕೊಂಡರೂ, ಅವೆಲ್ಲದಕ್ಕೂ ಅವರು ಯಜಮಾನ ಆಗುತ್ತಾರೆ. ಹಾಗೆಯೇ ಅಖಿಲಾಂಡ ಬ್ರಹ್ಮಾಂಡವಾದ, ಅನಂತವಾದ ಈ ಸೃಷ್ಟಿಯನ್ನು ನಿರ್ಮಿಸಿದ್ದು, ಸೃಷ್ಟಿಸಿದ್ದು, ಬಬ್ಬನೇ ಎಂದು ತಿಳಿದುಕೊಳ್ಳಬೇಕು. ಕಾರಣ ಈ ಸೃಷ್ಟಿಯಲ್ಲಿ ಕೆಲವನ್ನು ಅನೇಕರು ಸೇರಿ ನಿರ್ಮಿಸುತ್ತಾರೆ. ಕೆಲವನ್ನು ಅನೇಕ ಜನ ಸೇರಿ ನಿರ್ಮಿಸುತ್ತಾರೆ. ಅಂದರೆ ಒಂದಕ್ಕೆ ಅನೇಕ ಜನ ಯಜಮಾನರಿರುತ್ತಾರೆ. ಆದರೆ ಈ ಸಮಸ್ತ ಸೃಷ್ಟಿಗೆ 'ಯಜಮಾನ' ಒಬ್ಬನೇ! 'ಮಾಲಿಕ್ ಒಬ್ಬನೇ'! ಎಂದು ಶಿರಡಿ ಬಾಬಾ ಹೇಳಿದ್ದಾರೆ

ಅಖಿಲಾಂಡ ಬ್ರಹ್ಮಾಂಡವಾದ ಈ ಸೃಷ್ಟಿಯನ್ನು ಸೃಷ್ಟಿ ಮಾಡಿದ ಯಜಮಾನನನ್ನು ಎಲ್ಲರೂ ಅನೇಕ ರೀತಿಯಲ್ಲಿ ಕರೆಯುತ್ತಾರೆ. ಮುಸ್ಲಿಮರು, 'ಅಲ್ಲಾ' ಎಂದು ಕ್ರಿಶ್ಚಿಯನ್ನರು 'ತಂದೆ' ಎಂದು ಹಿಂದುಗಳು 'ಭಗವಂತ', ಸೃಷ್ಟಿಕರ್ತ ಎಂದು 'ಪರಬ್ರಹ್ಮ', 'ಪರಮಾತ್ಮ', 'ಈಶ್ವರನು' 'ವಿಶ್ವಾತ್ಮ' 'ಆದಿಶಕ್ತಿ' ಎಂದು ಹೀಗೆ ಬಗೆಬಗೆಯಾಗಿ ಕರೆಯುತ್ತಾರೆ. ಬಾಬಾ ಹೇಳಿದ ಹಾಗೆ ಈ ಸೃಷ್ಟಿಗೆಲ್ಲಾ ಯಜಮಾನ ಒಬ್ಬನೇ. ಇದನ್ನು ಪ್ರತಿ ಒಬ್ಬರೂ ತಿಳಿದಿಕೊಳ್ಳಬೇಕು. ನೆನಪಿನಲ್ಲಿಟ್ಟುಕೊಳ್ಳಬೇಕು.

ಅಂದರೆ ಈ ಸೃಷ್ಟಿಯಲ್ಲಿ ಕಣ್ಣಿಗೆ ಕಾಣಿಸುವ, ಕಾಣಿಸದೇ ಇರುವುದು ಇದೆ. ಅವು ಯಾವುದಾದರೂ ಸರಿಯೇ ಎಲ್ಲದಕ್ಕೂ ಯಜಮಾನ ಭಗವಂತನೇ. ಅಂದರೆ ಕಾಣಿಸುವ ಲೋಕಗಳು 84ಲಕ್ಷ ಬಗೆಬಗೆಯ ಜೀವರಾಶಿಗಳು, ಒಂದು ಮಾತಿನಲ್ಲಿ ಹೇಳಬೇಕೆಂದರೆ ಈ ಸೃಷ್ಟಿಯಲ್ಲಿ ಏನು ಸೃಷ್ಟಿಸಲ್ಪಟ್ಟರೂ! ಯಾವುದು ಲಯವಾಗುತ್ತಿದ್ದರೂ! ಎಲ್ಲದಕ್ಕೂ ಯಜಮಾನ ಭಗವಂತನೇ.

ಆತನೇ ಈ ಸೃಷ್ಟಿಯಲ್ಲಿ ದೊಡ್ಡವನು. ನಿಜಕ್ಕೂ ಎಲ್ಲಾ ಕಡೆ ಇರುವುದೇ ಆತ. ಆತನಿಂದಲೇ ಎಲ್ಲಾ ಸೃಷ್ಟಿಸಲ್ಪಟ್ಟಿದೆ. ಕೊನೆಗೆ ಎಲ್ಲರೂ ತಿಳಿದಿರುವ ದೇವರುಗಳು ಕೂಡಾ ಆತನಿಂದ ಬಂದವರೇ! ಅಂದರೆ ಎಲ್ಲರಿಗೂ ಆತನೇ ಯಜಮಾನ. ತಂದೆಸಹ. ಅದಕ್ಕೆ ಜೀಸಸ್ ನನ್ನ ತಂದೆಯ ರಾಜ್ಯ ಎನ್ನುತ್ತಾರೆ. ಒಂದು ರೀತಿಯಲ್ಲಿ ನೋಡಿದರೆ ಬೇರೆ ಏನೂ ಇಲ್ಲ. ಆದ್ದರಿಂದ ಪ್ರತಿ ಒಬ್ಬರ ಧರ್ಮವೇನೆಂದರೆ ಈ ಸತ್ಯವನ್ನು ತಿಳಿದುಕೊಳ್ಳಬೇಕು. ಅರ್ಥಮಾಡಿಕೊಳ್ಳಬೇಕು. ಅಂತವರಿಗೆ ಎಲ್ಲಾ ಕಡೆ ಆನಂದವೇ ಎಲ್ಲಾ ಕಡೆ ಶಾಂತಿಯೇ ಶಾಂತಿ.

ಕಾರಣ ನಾನು ಎನ್ನುವುದಿಲ್ಲ ಆದ್ದರಿಂದ 'ನಾನು' ಇದ್ದರೇನೆ ಏನಾದರೂ ಇರುತ್ತದೆ. 'ನಾನು' ಇಲ್ಲದಿರುವಾಗ ಇನ್ನು ಏನು ಇರುತ್ತದೆ? ಎಲ್ಲಾ ದೈವವೇ, ಎಲ್ಲಾ ಬ್ರಹ್ಮವೇ, ಎಲ್ಲಾ ಕಡೆ ಭಗವಂತನೇ ಇದ್ದಾನೆ. ಅದೇ ಮುಕ್ತಸ್ಥಿತಿ. ಈ ವಿಷಯವನ್ನೇ ಶಿರಡಿ ಬಾಬಾ ತಿಳಿದುಕೊಳ್ಳಿ ಎನ್ನುತ್ತಾರೆ. ಆ ಮಾರ್ಗವೇ 'ಶ್ವಾಸದ ಮೇಲೆ ಧ್ಯಾಸ' ಧ್ಯಾನದ ಮೂಲಕ ಯಾರಾದರೂ "ಸಬ್‌ಕಾ ಮಾಲಿಕ್ ಏಕ್ ಹೈ" ಎನ್ನುವುದನ್ನು ಅರ್ಥಮಾಡಿಕೊಳ್ಳಬಲ್ಲರು.

•



# ಪರಿಪ್ರಶ್ನೆ?

ಬಾಬಾ ವಿವರಣೆ

ಅನೇಕ ಜನ ಪ್ರಶ್ನೆಗಳನ್ನು ಕೇಳುತ್ತಿರುತ್ತಾರೆ ಹಾಗೆ ಪ್ರಶ್ನೆಗಳನ್ನು ಕೇಳಲು ಅನೇಕ ಕಾರಣಗಳಿರುತ್ತವೆ. ಕೆಲವರು ಸುಮ್ಮನೆ ಪ್ರಶ್ನೆಗಳನ್ನು ಕೇಳುತ್ತಿರುತ್ತಾರೆ. ಇನ್ನೂ ಕೆಲವರು ಇತರರಲ್ಲಿ ತಪ್ಪು ಹಿಡಿಯಲು, ಅವರಲ್ಲಿರುವ ಲೋಪದೋಷಗಳನ್ನು ತೋರಿಸಲು ಪ್ರಶ್ನೆಗಳನ್ನು ಕೇಳುತ್ತಾರೆ. ಇನ್ನೂ ಕೆಲವರು ಹತ್ತಾರು ಜನಗಳ ನಡುವೆ ದೊಡ್ಡಸ್ತಿಕೆ ತೋರಿಸಿಕೊಳ್ಳಲು ಪ್ರಶ್ನೆಗಳನ್ನು ಹಾಕುತ್ತಿರುತ್ತಾರೆ. ಇನ್ನೂ ಕೆಲವರು ನನಗೆ ಎಲ್ಲಾ ಗೊತ್ತಿದೆ ಎಂದು ತಿಳಿಸಲು ಪ್ರಶ್ನೆಗಳನ್ನು ಹಾಕುತ್ತಿರುತ್ತಾರೆ. ಇನ್ನೂ ಕೆಲವರು ದುರ್ಬುದ್ಧಿಯಿಂದ ಕಳ್ಳರ ಹಾಗೆ ತಮ್ಮ ಎದುರಿಗೆ ಇರುವವರನ್ನು ಬುಟ್ಟಿಯಲ್ಲಿ ಹಾಕಿಕೊಳ್ಳಲು ಅವರಿಗೆ ಏನೂ ತಿಳಿಯುವುದಿಲ್ಲ ಎಂದು ನಿರೂಪಿಸಲು ಹತ್ತಾರು ಜನಗಳ ನಡುವೆ ಅವರನ್ನು ಕಡಿಮೆ ಮಾಡಿ ತೋರಿಸಲು ಪ್ರಶ್ನೆಗಳನ್ನು ಹಾಕುತ್ತಿರುತ್ತಾರೆ. ಕೆಲವರು ಇತರರನ್ನು ಪರೀಕ್ಷಿಸಲು ಪ್ರಶ್ನೆಗಳನ್ನು ಹಾಕುತ್ತಾರೆ.

ಅಷ್ಟೇ ವಿನಃ ಧ್ಯಾನ ಪಡೆಯಲಿಕ್ಕಲ್ಲ. ಗೊತ್ತಿಲ್ಲದ ವಿಷಯಗಳನ್ನು ತಿಳಿದಕೊಳ್ಳುವುದಕ್ಕಾಗಿ ಅಲ್ಲ. ಹಾಗೆಯೇ ಅದೇ ಪ್ರಶ್ನೆಯನ್ನು ಬಂದವರೆಲ್ಲರನ್ನೂ ಕೇಳುತ್ತಿರುತ್ತಾರೆ. ನಿಜವಾಗಲೂ ಸಂದೇಹವಿದ್ದರೆ ಅಷ್ಟು ಜನರನ್ನು ಅದೇ ಪ್ರಶ್ನೆ ಕೇಳಬೇಕಾದ ಅವಶ್ಯಕತೆ ಏನಿದೆ.

ಹಾಗೆಯೇ ಕೆಲವರು ಪ್ರಶ್ನೆಗಳನ್ನು ಕೇಳಿ ಅವರು ಏನಾದರೂ ಉತ್ತರವನ್ನು ಹೇಳಿದರೆ ಅದು ಅಲ್ಲ ಎಂದು ಅವರ ಜೊತೆ ಚರ್ಚೆಗೆ ಇಳಿಯುತ್ತಾರೆ. ನಿಜವಾಗಲೂ ಗೊತ್ತಿಲ್ಲದ್ದನ್ನು ತಿಳಿದುಕೊಳ್ಳಬೇಕೆನಿಸಿದರೆ ಅವರು ಚರ್ಚಿಸುವುದಿಲ್ಲ. ವಾದ ಮಾಡುವುದಿಲ್ಲ. ಉತ್ತರ ಹೇಳಿದ ತಕ್ಷಣ ಸುಮ್ಮನೆ ಇರುತ್ತಾರೆ. ನೀನು ಹೇಳಿದ್ದು ತಪ್ಪು ಎಂದಾದರೆ ಅದಕ್ಕೆ ಉತ್ತರ ನಿನಗೆ ಗೊತ್ತಿಲ್ಲ ಎಂದು ಹೇಳಿದ ಹಾಗೆ ಅಲ್ಲವೇ? ಹಾಗಲ್ಲ ಎಂದರೆ ಅದಕ್ಕೆ ಉತ್ತರ ಅವರಿಗೆ ಗೊತ್ತಿದೆ ಎಂದರ್ಥ ಅಲ್ಲವೇ? ಅವನು ಏನು ಹೇಳುತ್ತಾನೋ ನೋಡೋಣ ಎಂದು ನೋಡಲಿಕ್ಕಾಗಿಯೇ ಅಲ್ಲವೇ? ಅಷ್ಟೇ ಹೊರತು ಸಂದೇಹವೇನಿಲ್ಲ. ತಿಳಿದುಕೊಳ್ಳುವುದಕ್ಕಾಗಿ ಅಲ್ಲ, ಗೊತ್ತಿಲ್ಲ ಎಂದಲ್ಲ.

ಇಂತವರು ಹಾಕುವ ಪ್ರಶ್ನೆಗಳಿಗೆ ಜ್ಞಾನಿಗಳು, ಜ್ಞಾನ ಇರುವವರು ಉತ್ತರ ನೀಡುವುದಿಲ್ಲ. ಉತ್ತರ ಹೇಳಲು ಪ್ರಯತ್ನಿಸುವುದಿಲ್ಲ. ಕಾರಣ ಅನವಶ್ಯಕ ಚರ್ಚೆಗಳಿಗೆ ಅವರು ಅವಕಾಶ ಕೊಡುವುದಿಲ್ಲ. ಅವರು ಮೂರ್ಖರ ಜೊತೆ ಚರ್ಚೆ ಮಾಡಲು ಇಷ್ಟ ಪಡುವುದಿಲ್ಲ. ಅವನು ಕೇಳುವ ಪ್ರಶ್ನೆಯಿಂದ ಅವರು ಅರ್ಥಮಾಡಿಕೊಳ್ಳುತ್ತಾರೆ. ಆದ್ದರಿಂದಲೇ ಅವರ ಪ್ರವರ್ತನೆ ಉತ್ತರ ನೀಡುತ್ತದೆ. ಹಾಗೆ ಕೆಲವರು ಕೇಳಿಸಿಕೊಳ್ಳುವುದರ ಮೇಲೆ ಆಸಕ್ತಿ ತೋರಿಸುವುದಿಲ್ಲ. ಕೇಳುವುದರ ಮೇಲೆ ಆಸಕ್ತಿ ತೋರಿಸುತ್ತಾರೆ. ಹೇಳುವವರನ್ನು ಹೇಳಲು ಬಿಡುವುದಿಲ್ಲ, ಇನ್ನೂ ಸಂದರ್ಭರಹಿತ ಪ್ರಶ್ನೆಗಳೂ, ಕೊಟ್ಟ ಸಂದೇಶಕ್ಕೆ ವಿರುದ್ಧವಾದ ಪ್ರಶ್ನೆಗಳು ಹಾಕುತ್ತಿರುತ್ತಾರೆ. ಇನ್ನೂ ಕೆಲವರು ಪ್ರಶ್ನೆಗಳನ್ನು ಹಾಕುತ್ತಾ ಅಲ್ಲಿ ಗಲಭೆ ಎಬ್ಬಿಸುತ್ತಾರೆ. ನಿಜಕ್ಕೂ ಸಭೆಯನ್ನೇ ಸರಿಯಾಗಿ ಮುಂದುವರಿಯಲು ಬಿಡುವುದಿಲ್ಲ. ಇನ್ನೂ ಕೆಲವರು ವಿಷಯವನ್ನು

ಪೂರ್ತಿಗೊಳಿಸಲು ಬಿಡುವುದಿಲ್ಲ. ಪೂರ್ತಿಯಾಗಿ ಕೇಳಿಕೊಳ್ಳುವುದಿಲ್ಲ. ಮಧ್ಯದಲ್ಲೇ

ಪ್ರಶ್ನಿಸುತ್ತಾರೆ. ನಿಜಕ್ಕೂ ಪ್ರಸಂಗವನ್ನು ಪೂರ್ತಿಯಾಗಿ ಕೇಳಿಸಿಕೊಂಡರೆ ಆ ಪ್ರಶ್ನೆಗೆ ಆ ಪ್ರಸಂಗದಲ್ಲೇ ಉತ್ತರ ಸಿಗುತ್ತದೆ. ಹಾಗೆಯೇ ಕೆಲವರು ಪ್ರವಚನ ನೀಡುವಾಗ ಬೇರೆ ದೃಷ್ಟಿಯಿಂದ ಇರುತ್ತಾರೆ. ಸರಿಯಾಗಿ ಕೇಳಿಸಿಕೊಳ್ಳುವುದಿಲ್ಲ. ಇನ್ನೂ ಕೆಲವರು ಮಧ್ಯದಲ್ಲಿ ಹೇಳಿದ ವಿಷಯಗಳನ್ನು ಕುರಿತೇ ಪ್ರಶ್ನೆಗಳನ್ನು ಹಾಕುತ್ತಾರೆ.

ಇನ್ನೂ ಕೆಲವರು ಎಲ್ಲೋ ಏನೋ ಕೇಳಿರುತ್ತಾರೆ ಅಲ್ಲಿ ಅವರು ಹೇಳುತ್ತಿದ್ದರೆ ಹೇಳಿದ ವಿಷಯವನ್ನು ಕುರಿತು ವಿಶ್ಲೇಷಣೆ ಮಾಡಿಕೊಳ್ಳುವುದಿಲ್ಲ. ಯೋಚಿಸುವುದಿಲ್ಲ. ಆದರೆ ಅಲ್ಲಿ ಆತ ಹಾಗೆ ಏಕೆ ಹೇಳಿದ್ದಾರೆ ಎಂದು ಕೇಳುತ್ತಾರೆ. ಇನ್ನೂ ಕೆಲವರು ನೀವು ಹೇಳಿದ್ದು ಸರಿಯಾಗಿದೆ ಆದರೆ ಆತ ಹಾಗೆ ಏತಕ್ಕಾಗಿ ಹೇಳಿದ್ದಾರೆ? ಎಂದು ಪ್ರಶ್ನಿಸುತ್ತಾರೆ. ಆದರೆ ಹಾಗೆ ಏಕೆ ಹೇಳಿರುವಿರಿ? ಎಂದು ಹೇಳಿದವರನ್ನು ಪ್ರಶ್ನಿಸುವುದಿಲ್ಲ.

ಹೀಗೆ ಹೇಳುತ್ತಾ ಹೋದರೆ ಪ್ರಶ್ನಿಸುವವರಲ್ಲಿ ಬಗೆಬಗೆಯ ಜನ ಇರುತ್ತಾರೆ. ವಿಧವಿಧವಾದ ಉದ್ದೇಶಗಳಿಂದ ಪ್ರಶ್ನಿಸುವವರು ಇರುತ್ತಾರೆ.

ಆದರೆ ಹೇಗೆ ಪ್ರಶ್ನಿಸಬೇಕು? ಎಂತಹ ಪ್ರಶ್ನೆಗಳನ್ನು ಕೇಳಬೇಕು? ಯಾವ ಸಂದರ್ಭದಲ್ಲಿ ಕೇಳಬೇಕು? ಪ್ರಶ್ನೆಗಳನ್ನು ಕೇಳುತ್ತಿರುವಾಗ ಅವರನ್ನು ಎಷ್ಟು ಗೌರವದಿಂದ ನೋಡಬೇಕು? ಎನ್ನುವುದನ್ನು ಯೋಚಿಸುವುದಿಲ್ಲ, ನಿಜವಾಗಲೂ ಹೇಳುತ್ತಿರುವುದು ಇಷ್ಟವಾಗದೇ ಇದ್ದರೂ! ತಪ್ಪು ಎಂದು ಅನಿಸುತ್ತಿದ್ದರೂ! ವಿವೇಕವಂತವನಾದರೇ ಕೇಳಿಸಿಕೊಳ್ಳುವುದಿಲ್ಲ, ವಿಮರ್ಶಿಸುವುದಿಲ್ಲ, ಅಲ್ಲಿ ಕುಳಿತುಕೊಳ್ಳುವುದಿಲ್ಲ, ನಿಧಾನಕ್ಕೆ ಅಲ್ಲಿಂದ ಹೊರಗೆ ಹೋಗುತ್ತಾನೆ.

ಕಾರಣವೇನೆಂದರೆ ಹೇಳುವವರೆಲ್ಲ ಒಂದೇ ಮಟ್ಟದಲ್ಲಿ ಇರುವುದಿಲ್ಲ, ಒಂದೇ ವಿಧವಾದ ಜ್ಞಾನವನ್ನು ಹೊಂದಿರುವುದಿಲ್ಲ ಎನ್ನುವುದು ವಿವೇಕವಂತರಿಗೆ ಗೊತ್ತಿದೆ. ಅವರವರ ಹಂತದಲ್ಲಿ ಅವರವರ ಮಟ್ಟಕ್ಕೆ ತಕ್ಕ ಹಾಗೆ, ಯಾರಿಗೆ ಎಷ್ಟು ಗೊತ್ತಿದೆಯೋ ಅಷ್ಟೇ ಹೇಳುತ್ತಾರೆಂದು ವಿವೇಕವಂತರು ಅಂದರೆ ಬುದ್ಧಿ ಇರುವವರು ಅರ್ಥಮಾಡಿಕೊಳ್ಳುತ್ತಾರೆ. ಅದಕ್ಕೆ ವಾದಿಸುವುದಿಲ್ಲ. ಬುದ್ಧಿ ಇರುವವನು ಇಷ್ಟವಾದರೆ ಕೇಳಿಸಿಕೊಳ್ಳುತ್ತಾನೆ ಇಷ್ಟವಿಲ್ಲದಿದ್ದರೆ ಅಲ್ಲಿಂದ ಹೊರಟು ಹೋಗುತ್ತಾನೆ. ಅವಶ್ಯಕವಾದರೆ ಇಷ್ಟವಾದದ್ದನ್ನು ಮಾತ್ರ ತೆಗೆದುಕೊಳ್ಳುತ್ತಾನೆ. ಉಳಿದಿದ್ದನ್ನೆಲ್ಲಾ ಬಿಟ್ಟುಬಿಡುತ್ತಾನೆ. ಯಾವುದೂ ಇಷ್ಟವಾಗದಿದ್ದರೆ ಪೂರ್ತಿಯಾಗಿ ಹೇಳಿದ್ದೆಲ್ಲಾ ಅಲ್ಲೇ ಬಿಟ್ಟುಬಿಡುತ್ತಾನೆ. ಅಂದರೆ ಆ ಕಿವಿ ಇಂದ ಕೇಳಿ ಈ ಕಿವಿ ಇಂದ ಬಿಡುತ್ತಾನೆ. ಎಲ್ಲ ಮರೆತುಬಿಡುತ್ತಾನೆ. ಕಾರಣ ಈ ಲೋಕದಲ್ಲಿ ಎಂದೂ! ಯಾರೂ ಸಹ! ಒಂದೇ ವಿಧವಾಗಿ ಹೇಳುವುದಿಲ್ಲ. ನಮಗೆ ಬೇಕಾಗಿರುವುದೇ ಹೇಳುವುದಿಲ್ಲ. ನಮಗೆ ಇಷ್ಟವಾದ ಹಾಗೆ ಹೇಳುವುದಿಲ್ಲ. ಕಾರಣ ಎಲ್ಲರ ಜ್ಞಾನ ಒಂದೇ ಹಂತದಲ್ಲಿ ಇರುವುದಿಲ್ಲ. ಆದ್ದರಿಂದ ಪ್ರಶ್ನೆಗಳನ್ನು ಹಾಕುವಾಗ ಯಾರಾದರೂ ಸರಿಯೇ ಮೇಲೆ ಹೇಳಿರುವ ವಿಷಯಗಳನ್ನೆಲ್ಲಾ ದೃಷ್ಟಿಯಲ್ಲಿ ಇಟ್ಟುಕೊಳ್ಳಬೇಕು.

ಹಾಗೆಯೇ ಒಂದು ಸಂದರ್ಭದಲ್ಲಿ ಒಬ್ಬ ಶಿಷ್ಯನಿಗೆ ಶಿರಡಿ ಬಾಬಾರವರು ಹೇಗೆ ಪ್ರಶ್ನಿಸಬೇಕು? ಯಾವ ಸಂದರ್ಭದಲ್ಲಿ ಪ್ರಶ್ನಿಸಬೇಕು? ಯಾವ ವಿಷಯಗಳನ್ನು ಕುರಿತು ಪ್ರಶ್ನಿಸಬೇಕು? ಎನ್ನುವ ವಿಷಯವನ್ನು ಕುರಿತು ವಿವರವಾಗಿ ಹೇಳಿದ್ದಾರೆ. ಅದನ್ನು 39ನೇಯ ಅಧ್ಯಾಯದಲ್ಲಿ 293–294ನೇ ಪುಟದಲ್ಲಿ ವಿವರಿಸಲಾಗಿದೆ.

ಒಂದು ದಿನ ಬಾಬಾ ಶಿಷ್ಯರಾದ ನಾನಾ ಸಾಹೇಬ ಚಾಂಡೋರ್ಕರ್‌ಗೆ ಈ

ವಿಷಯದ ಮೇಲೆ ಒಳ್ಳೆಯ ವಿವರಣೆ ನೀಡಲಾಗಿದೆ. ನಾನಾ ಭಗವದ್ಗೀತೆಯಲ್ಲಿ ಒಂದು ಶ್ಲೋಕವನ್ನು ಕುರಿತು ಕೇಳಿದಾಗ ಬಾಬಾ ತುಂಬಾ ಚೆನ್ನಾಗಿ ಅದನ್ನು ವಿವರಿಸಿದರು.

ಶ್ಲೋ॥ **ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನಾ ಸೇವಯೊ!**

**ಉಪದೇಕ್ಷ್ಯನ್ತಿ ತೇ ಜ್ಞಾನಂ ಜ್ಞಾನಿನ ಸ್ತತ್ತ್ವ ದರ್ಶಿನಃ (ಭ ಗೀ.4–34)**

**ಭಾವಾರ್ಥ :–** (ಓ ಅರ್ಜುನ) ಅಂತಹ ಜ್ಞಾನವನ್ನು ನೀನು ತತ್ವಜ್ಞಾನಿಗಳಿಗೆ (ಮೋಕ್ಷವನ್ನು ಹೊಂದುವ ಜ್ಞಾನ ಇರುವವರು ಅಂದರೆ ಪರಬ್ರಹ್ಮನನ್ನು ತಿಳಿದಿರುವವರಿಗೆ) ಸಾಷ್ಟಾಂಗ ನಮಸ್ಕಾರ ಮಾಡಿ, ಸಮಯ ನೋಡಿ ವಿನಯದಿಂದ ಪ್ರಶ್ನಿಸಿ, ಸೇವೆ ಮಾಡಿ, ಅವರಿಂದ ತಿಳಿದುಕೊಳ್ಳಿ. ಅವರು ತಪ್ಪದೇ ಉಪದೇಶಿಸುತ್ತಾರೆ.

ಶಿರಡಿ ಬಾಬಾ ಮೇಲೆ ತಿಳಿಸಿದ ಭಾವಾರ್ಥಕ್ಕೆ ಇರುವ ಅಂತರಾರ್ಥವನ್ನು ನಾನಾ ಸಾಹೇಬ್‌ಗೆ ಈ ರೀತಿಯಾಗಿ ವಿವರಿಸಿದರು.

1) ಜ್ಞಾನಿಗಳ ಮುಂದೆ ಬರಿ ಸಾಷ್ಟಾಂಗ ನಮಸ್ಕಾರ ಮಾಡಿದರೆ ಸಾಲದು. ಸದ್ಗುರುವಿಗೆ ಸರ್ವಸ್ವ ಶರಣಾಗತಿಯಿಂದ ಇರಬೇಕು.

2) ಸುಮ್ಮನೆ ಪ್ರಶ್ನಿಸಿದರೆ ಸಾಲದು. ದುರ್ಬುದ್ಧಿಯಿಂದಾಗಲಿ, ಕಳ್ಳಬುದ್ಧಿಯಿಂದಾಗಲಿ, ಇತರರನ್ನು ಬುಟ್ಟಿಯಲ್ಲಿ ಹಾಕಿಕೊಳ್ಳುವುದಕ್ಕಾಗಲಿ, ಇತರರ ತಪ್ಪುಗಳನ್ನು ಹಿಡಿಯುವುದಕ್ಕಾಗಲಿ, ಕೆಲಸಕ್ಕೆ ಬಾರದ ಆಸಕ್ತಿಯಿಂದಾಗಲಿ, ಕೇಳಬಾರದು. ಮೋಕ್ಷವನ್ನು ಹೊಂದಲು, ಆಧ್ಯಾತ್ಮಿಕಾಭಿವೃದ್ಧಿಗಾಗಿ, ನಿಜವಾಗಲೂ ತಿಳಿದುಕೊಳ್ಳಲು ಪ್ರಶ್ನೆಗಳನ್ನು ಕೇಳಬೇಕು.

3) ಸೇವೆ ಎಂದರೆ ಇಷ್ಟವಾದರೆ ಮಾಡಬಹುದು, ಇಲ್ಲದಿದ್ದರೆ ಬಿಡಬಹುದು ಎನ್ನುವ ಅಭಿಪ್ರಾಯದಿಂದ ಮಾಡುವ ಸೇವೆ ಸೇವೆಯಲ್ಲ. ಶರೀರ ತನ್ನದಲ್ಲವೆಂದು, ಹಣಕ್ಕೆ ತಾನು ಯಜಮಾನಿ ಅಲ್ಲವೆಂದು, ಶರೀರವು ಗುರುಗಳದೆಂದು, ಅವರ ಸೇವೆಗಾಗಿಯೇ ಶರೀರವಿದೆ ಎಂದು ಭಾವಿಸಬೇಕು. ಹಾಗೆ ಮಾಡಿದಾಗ ಸದ್ಗುರುವು ಜ್ಞಾನವನ್ನು ಬೋಧಿಸುತ್ತಾರೆ. ?

ಹಾಗೆಯೇ ಬಾಬಾ ಜ್ಞಾನವೆಂದರೆ ಏನು? ಅದನ್ನು ಹೇಗೆ ಬೋಧಿಸಬೇಕೋ ಕೂಡ ತಿಳಿಯ ಪಡಿಸಿದರು.

**"ಅಜ್ಞಾನವನ್ನು ತೊಲಗಿಸುವುದೇ ಜ್ಞಾನವೆಂದು ಹೇಳಿದರು". "ಕತ್ತಲೆಯುನ್ನು ಹೋಗಲಾಡಿಸುವುದೇ ಬೆಳಕು". "ದೈತ್ಯವನ್ನು ನಾಶಗೊಳಿಸುವುದು ದೈವತ್ವವು". "ದೈತ್ಯವನ್ನು ನಾಶಗೊಳಿಸುವುದು ಅಂದರೆ ಬೆಳಕನ್ನು ಕುರಿತು ಹೇಳುವುದು".**

ಅದ್ವೈತ್ಯವನ್ನು ಹೊಂದಬೇಕಾದರೇ ದ್ವೈತ್ಯ ಎನ್ನುವ ಭಾವನೆಯನ್ನು ಮನಸ್ಸಿನಿಂದ ತೆಗೆದುಹಾಕಬೇಕು. ಅದೇ ದೈವತ್ವವನ್ನು ಹೊಂದುವ ಜ್ಞಾನ.

ಸದ್ಗುರುವು ನಿರ್ಗುಣನು ಸಚ್ಚಿದಾನಂದನು, ಅವರು ಮಾನವ ಆಕಾರದಲ್ಲಿ ಅವತರಿಸುವುದು ಜಗತ್ತನ್ನು ಮಾನವರನ್ನು ಉದ್ಧರಿಸಲಿಕ್ಕಾಗಿಯೇ. ಹಾಗೆ ಮಾನವ ರೂಪ ಧರಿಸುವುದರಿಂದ ಅವರು ನಿರ್ಗುಣ ಸ್ವಭಾವ ಸ್ವಲ್ಪವೂ ವಿಕಾರವಾಗುವುದಿಲ್ಲ. ಅವರ ಸತ್ಯಸ್ವರೂಪವೂ, ದೈವಿಕಶಕ್ತಿ, ಜ್ಞಾನವೂ ಕಡಿಮೆಯಾಗುವುದಿಲ್ಲ. ಶಿಶ್ಯನು ಕೂಡಾ ಅಂತವನೇ ಆದರೆ ಆತನ ಅನೇಕ ಜನ್ಮಗಳ ಅಜ್ಞಾನದಿಂದ ತಾನೇ ಶುದ್ಧ ಚೈತನ್ಯವು ಎನ್ನುವ ಸಂಗತಿ ಮುಚ್ಚಿಹಾಕುತ್ತವೆ. ಶಿಷ್ಯನು ನನ್ನದು ಸಾಮಾನ್ಯ ನಿಕೃಷ್ಟ ಜೀವನ ಎಂದು ಅಂದುಕೊಳ್ಳುತ್ತಿರುತ್ತಾನೆ. ಗುರುವು ಶಿಷ್ಯನಲ್ಲಿರುವ ಈ ಅಜ್ಞಾನವನ್ನು ಬುಡಸಮೇತ ತೆಗೆದುಹಾಕಬೇಕು. ಅದಕ್ಕೆ ತಕ್ಕ

ಉಪದೇಶ ನೀಡಬೇಕು. ಶಿಷ್ಯನು ಎಣಿಸಲಾರದಷ್ಟು ಜನ್ಮಗಳಿಂದ ಸಂಪಾದಿಸಿದ ಅಜ್ಞಾನವನ್ನು ಗುರುವು ನಿರ್ಮೂಲಿಸಿ ಉಪದೇಶಿಸಬೇಕು.

ಅನೇಕ ಜನ್ಮಗಳಿಂದ ತಾನು ನಿಕೃಷ್ಟ ಜೀವಿಯೆಂದುಕೊಂಡಿರುವ **"ಶಿಷ್ಯನಿಗೆ ಗುರುವು ನೀನೇ ದೈವ, ಶಕ್ತಿವಂತ, ಐಶ್ವರ್ಯಶಾಲಿ"ಎಂದು ಬೋಧಿಸಬೇಕು. ಆಗ ಶಿಷ್ಯನು ಕ್ರಮೇಣ ತಾನೇ ದೈವವೆಂದು ಗ್ರಹಿಸುತ್ತಾನೆಂದು"**. ಶಿರಡಿ ಬಾಬಾ ನಾನಾ ಸಾಹೇಬಗೆ ಹೇಳಿದರು.

ಅವರು ಇನ್ನೂ ಈ ರೀತಿ ಹೇಳಿದರು. **"ಶಿಷ್ಯನು ತಾನು ಶರೀರವೆಂದು, ತಾನೊಬ್ಬ ಜೀವಿ ಎಂದು, ಈ ಲೋಕವು, ದೇವರು, ತನಗಿ---ಂತ ಬೇರೆ ಎಂದು ನೆನೆಯುವುದು ಅನೇಕ ಜನ್ಮಗಳಿಂದ ಬರುತ್ತಿರುವ ದೋಷವೇ ವಿನಹ ಬೇರೆ ಅಲ್ಲ. ಹಾಗೆ ಭಾವಿಸುತ್ತಾ ಮಾಡಿದ ಕರ್ಮಗಳಿಂದ ಅವನಿಗೆ ಸಂತೋಷವು ವಿಚಾರವು ಈ ಎರಡರ ಮಿಶ್ರವೂ ಉಂಟಾಗುತ್ತದೆ ಎಂದು ಬಾಬಾ ಹೇಳಿದರು"**.

ಶಿಷ್ಯನು ಈ ಭ್ರಮೆಯನ್ನು, ಈ ದೋಷವನ್ನು, ಈ ಮೂಲ ಅಜ್ಞಾನವನ್ನು, ಕುರಿತು ವಿಚಾರಿಸಲು ಪ್ರಾರಂಭಿಸಬೇಕೆಂದರು. **"ನಿಜಕ್ಕೂ ಈ ಅಜ್ಞಾನವು ಹೇಗೆ ಅಂಕುರಿಸಿದೆ? ಅದು ಎಲ್ಲಿದೆ? ಎನ್ನುವುದನ್ನು ನೋಡುವುದೇ ಗುರುಪದೇಶವೆನ್ನುತ್ತಾರೆ"**. ಎಂದು ಬಾಬಾ ಹೇಳುತ್ತಾ ಈ ಕೆಳಗೆ ವಿವರಿಸಿದ್ದೆಲ್ಲಾ ಅಜ್ಞಾನದ ಲಕ್ಷಣಗಳೆಂದು ಹೇಳಿದ್ದಾರೆ.

1) ನಾನು ಒಂದು ಜೀವಿ. (ಪ್ರಾಣಿ)
2) ನಾನು ಶರೀರ.
3) ಭಗವಂತನು, ಪ್ರಪಂಚವು, ಜೀವನ ಬೇರೆ-ಬೇರೆ.
4) ನಾನು ದೇವರಲ್ಲ.
5) ಶರೀರವು ಆತ್ಮ ಅಲ್ಲ ಎಂದು ತಿಳಿದುಕೊಳ್ಳಲಾರದೇ ಇರುವುದು.
6) ದೇವನು, ಜೀವನು, ಪ್ರಪಂಚ, ಎಲ್ಲಾ ಒಂದೇ ಎಂದು ತಿಳಿಯದಿರುವುದು.

ಈ ತಪ್ಪುಗಳೆಲ್ಲಾ ತೋರಿಸದೇ ಇದ್ದರೆ ಶಿಷ್ಯನಿಗೆ ದೇವರೆಂದರೆ ಯಾರು? ಪ್ರಪಂಚವೆಂದರೆ ಏನು? ಶರೀರವೆಂದರೆ ಏನು? ಎನ್ನುವ ವಿಷಯಗಳನ್ನು ತಿಳಿಯಲಾರನು. ಅವುಗಳಲ್ಲಿ ಇರುವ ಸಂಬಂಧವೇನು? ನಿಜಕ್ಕೂ ಒಂದಕ್ಕಿಂತಾ ಇನ್ನೊಂದಕ್ಕೆ ವ್ಯತ್ಯಾಸವಿಲ್ಲವಾ? ಅಥವಾ ಎರಡು ಒಂದೇನಾ? ಎನ್ನುವ ವಿಚಾರವನ್ನು ಗ್ರಹಿಸಲಾರೆವು ಈ ವಿಷಯಗಳನ್ನೆಲ್ಲಾ ಬೋಧಿಸಿ ಅವರ ಅಜ್ಞಾನವನ್ನು ಹೋಗಲಾಡಿಸಲು ಹೇಳುವುದೆಲ್ಲಾ ಜ್ಞಾನವಾಗುತ್ತದೆಯಾ? ಅಜ್ಞಾನವಾಗುತ್ತದೆಯಾ? ನಿಜಕ್ಕೂ ಜೀವನ ಜ್ಞಾನಮೂರ್ತಿಯಾದರೆ ಜ್ಞಾನೋಪದೇಶ ಮಾಡುವ ಅವಶ್ಯಕತೆ ಇರುವುದಿಲ್ಲವಲ್ಲಾ? ಎಂದು ಹೇಳುತ್ತಾ ಬಾಬಾರವರು **"ಉಪದೇಶವೆಂದರೆ ಅವರ ತಪ್ಪನ್ನು ಅವರಿಗೆ ತೋರಿಸಿ ಅಜ್ಞಾನವನ್ನು ನಾಶಗೊಳಿಸುವುದೇ"**. ಎಂದು ಹೇಳಿದರು.

ಅವರು ಇನ್ನೂ ಪ್ರಣಿಪಾತ ಅಂದರೆ ಶರಣಾಗತಿ ಎಂದು ಅಂದರೆ ಶರೀರವು, ಮನಸ್ಸು, ಸಂಪತ್ತನ್ನು ಅರ್ಪಿಸುವುದು ಎಂದು ಸಹ ಹೇಳಿದ್ದಾರೆ. ಹಾಗೆ ಅಜ್ಞಾನವನ್ನು ತೊಲಗಿಸಿಕೊಳ್ಳಲು, ಜ್ಞಾನವನ್ನು ಹೊಂದಲು ಅಂತಹ ಸಾಮರ್ಥ್ಯವಂತರಾದ ಗುರುಗಳನ್ನು ಆಸಕ್ತಿಯಿಂದ ಸಮಯನೋಡಿ ಸಂದರ್ಭಾನುಸಾರವಾಗಿ ಪ್ರಶ್ನಿಸಬೇಕೆಂದು ಶಿರಡಿ ಬಾಬಾ ನಾನಾ ಸಾಹೇಬ್‌ಗೆ ವಿವರಿಸಿದರು.

•

# ಇಷ್ಟವಾದ ದೇವರನ್ನು ಭಾಧಿಸಬಹುದಾ?

ಅನೇಕ ಜನರಿಗೆ ಶಿರಡಿ ಸಾಯಿಬಾಬಾ ಅಂದರೆ ತುಂಬಾ ಇಷ್ಟ. ಕಾರಣವೇನೆಂದರೆ ಅವರು ಬಯಕೆಗಳನ್ನು ತೀರಿಸುವವರೆಂದೂ, ತಮ್ಮ ಕಷ್ಟಗಳನ್ನು, ನೋವುಗಳನ್ನು, ತೊಲಗಿಸುತ್ತಾರೆಂದು ಅವರ ನಂಬಿಕೆ. ಅವರನ್ನು ಆರಾಧಿಸಿದರೆ, ಪೂಜಿಸಿದರೆ, ಆಶ್ರಯಿಸಿದರೆ, ಅವರ ಕಷ್ಟಗಳು ತೊಲಗುತ್ತವೆ ಎಂದು ಅವರ ವಿಶ್ವಾಸ. ಅದಕ್ಕೆ ಬಾಬಾ ಅಂದರೆ ಅನೇಕರು ಇಷ್ಟಪಡುತ್ತಾರೆ.

ಅಷ್ಟೇಅಲ್ಲ ಅವರ ಮಹತ್ವಗಳನ್ನೂ, ಲೀಲೆಗಳನ್ನೂ, ಹೇಳಿಕೊಳ್ಳುತ್ತಾರೆ. ಅವರು ಜೀವಿಸಿರುವಾಗ ಭಕ್ತರಿಗೆ ಸಹಾಯ ಮಾಡಿದ ವಿಷಯಗಳು, ಕಷ್ಟಗಳಿಂದ ಕಾಪಾಡಿದ ಸಂಘಟನೆಗಳೂ, ಕಥೆಗಳ ಹಾಗೆ ಹೇಳಿಕೊಳ್ಳುತ್ತಾರೆ. ಆದ್ದರಿಂದ ಅವರನ್ನು ಆಶ್ರಯಿಸಿದರೆ ತಮ್ಮನ್ನು ಸಹ ಹಾಗೆಯೇ ಕಾಪಾಡುತ್ತಾರೆಂದು, ರಕ್ಷಿಸುತ್ತಾರೆಂದು, ಅವರ ನಂಬಿಕೆ. ಅಂತಹ ವಿಷಯಗಳು ಕೆಲವು ಬಾಬಾ ಸತ್‌ಚರಿತ್ರೆಯಲ್ಲಿ ಹೇಳಲಾಗಿದೆ.

ಅದರಲ್ಲಿ ಅವರ ಒಬ್ಬ ಭಕ್ತನು ತೀವ್ರವಾದ ರೋಗದಿಂದ ವಿಪರೀತವಾದ ಕೆಮ್ಮಿನಿಂದ ನೋವನ್ನು ಅನುಭವಿಸುತ್ತಿರುತ್ತಾನೆ. ಆ ಭಕ್ತನು ಈ ಬಾಧೆಯಿಂದ ಕಾಪಾಡಿ ಎಂದು ಬಾಬಾರವರನ್ನು ಬೇಡಿಕೊಳ್ಳುತ್ತಾನೆ, ಪ್ರಾರ್ಥಿಸುತ್ತಾನೆ. ಆಗ ಬಾಬಾ ಕರುಣಿಸಿ ಆ ಭಕ್ತನ ಮೊರೆ ಕೇಳಿಕೊಂಡು ಅವನ ರೋಗವನ್ನು, ಕೆಮ್ಮನ್ನು, ಉಪಶಮನ ಆಗುವಂತೆ ಮಾಡುತ್ತಾನೆ. ಆದರೆ ಅದೇ ಸಮಯದಲ್ಲಿ ಅದೇ ಬಾಧೆಯನ್ನು ಬಾಬಾ ಅನುಭವಿಸುತ್ತಿರುತ್ತಾರೆ. ಅಂದರೆ ಬಾಬಾ ಆ ಭಕ್ತನ ರೋಗವನ್ನು ತಾನು ತೆಗೆದುಕೊಂಡು ಆ ಬಾಧೆಯನ್ನು ಅವರು ಅನುಭವಿಸುತ್ತಾ, ಭಕ್ತನ ಬಾದೆಯನ್ನು ಕಡಿಮೆ ಮಾಡಿದರು. ಇಲ್ಲಿ ಭಕ್ತನು ಆನಂದಪರವಶವಾದ, ಆದರೆ ಆ ಬಾಧೆಯನ್ನು ಬಾಬಾರವರು ಅನುಭವಿಸಬೇಕಾಯಿತು.

ಇಲ್ಲಿ ನೀವು ಆಲೋಚಿಸಿದರೆ ಈ ಸೃಷ್ಟಿಯಲ್ಲಿ ಒಬ್ಬರ ಕಷ್ಟ ಹೋಗಲಾಡಿಸಬೇಕೆಂದರೆ ಇನ್ನೊಬ್ಬರು ಅದನ್ನು ಅನುಭವಿಸಬೇಕಾದ್ದೆ ಎಂದು ಅರ್ಥವಾಗುತ್ತದೆ. ಅಂದರೆ ದೇವರಾದರೂ ಆ ಬಾಧೆಯನ್ನು ತಾನು ತೆಗೆದುಕೊಳ್ಳದ ವಿನಹ ಭಕ್ತನಿಗೆ ವ್ಯಾಧಿ ಕಡಿಮೆಯಾಗಲಾರದೆಂದು ಅರ್ಥವಾಗುತ್ತದೆ.

ಇಲ್ಲಿ ಭಕ್ತನು ಯೋಚಿಸಬೇಕಾಗಿರುವುದು ತಮ್ಮ ಬಾಧೆಯನ್ನು ತೊಲಗಿಸಿ ಎಂದು ದೇವರನ್ನು ಪ್ರಾರ್ಥಿಸುತ್ತಿದ್ದಾರೆ. ಆರಾಧಿಸುತ್ತಿದ್ದಾರೆ. ಅಂದರೆ ಒಂದು ರೀತಿಯಲ್ಲಿ ಆ ಬಾಧೆಯನ್ನು ನೀನು ತೆಗೆದುಕೊ ಎಂದು ಬಯಸುವುದೇ ಅಲ್ಲವೇ? ಇದು ಭಕ್ತನಿಗೆ ಎಷ್ಟರ ಮಟ್ಟಿಗೆ ಸರಿ? ತನ್ನ ನೋವನ್ನು ಕಳೆದುಕೊಳ್ಳಲು ತನಗೆ ಇಷ್ಟವಾದ ದೇವರನ್ನು ಆ ನೋವು ಅನುಭವಿಸಿ ಎಂದು ಹೇಳುವುದು ಸರಿಯೇ? ತಾನು ತನಗೆ ಇಷ್ಟವಾದ ದೇವರನ್ನು ಬಾಧಿಸಬಹುದಾ? ತಾನು ಅನುಭವಿಸಲಾರದ್ದರಿಂದ ದೇವರನ್ನು ಬಾಧಿಸುವುದು, ಕಷ್ಟ ಕೊಡುವುದೇನಾ ತನಗೆ ಬೇಕಾಗಿರುವುದು? ತಾನು ಬಯಸುವುದು?

ನಿಜವಾದ ಭಕ್ತನು ದೇವರನ್ನು ಆನಂದಪಡಿಸಬೇಕೆಂದು ನೋಡುತ್ತಾನೆ. ಆದರೆ ಅವರನ್ನು ಬಾಧಿಸುವ ಕೆಲಸಗಳನ್ನು ಮಾಡುವುದಿಲ್ಲ. ದೇವರನ್ನು ಬಾಧಿಸುವವನು ಭಕ್ತನು ಹೇಗೆ ಆಗುತ್ತಾನೆ? ನಿಜವಾದ ಭಕ್ತನು ತಾನಾದರೂ ಆ ಬಾಧೆಯನ್ನು ಅನುಭವಿಸುತ್ತಾನೆ. ಆದರೆ ನನ್ನ ಬಾಧೆಯನ್ನು ತೆಗೆದುಕೊಂಡು ನೀನು ಅನುಭವಿಸು ಎಂದು ಬಯಸುವುದಿಲ್ಲ. ಆದ್ದರಿಂದ ಯೋಚಿಸಿ! ನಿಮಗೆ ಇಷ್ಟವಾದ ದೇವರಿಗೆ

ತೊಂದರೆಕೊಡಬಹುದಾ? ಈ ತರಹ ಹೇಳಿರುವುದರಿಂದ ಭಕ್ತರು ಈಗ ಏನು ಮಾಡಬೇಕು? ನಮ್ಮ ನೋವು, ಬಾಧೆ ಹೇಗೆ ಹೋಗುತ್ತದೆ? ಎಂದು ಕೇಳಬಹುದು. ಆದರೆ ಸ್ವಲ್ಪ ಯೋಚಿಸಿ **"ಬಾಧೆ ಹೇಗೆ ಹೋಗುತ್ತದೆ ಎಂದು ಕೇಳುತ್ತಿರುವಿರಿ ಆದರೆ ನಿಜಕ್ಕೂ ಆ ಬಾಧೆ ಹೇಗೆ ಬಂತು ಎಂದು ಏಕೆ ಯೋಚಿಸುವುದಿಲ್ಲ?"** ಮೊದಲು ಇದನ್ನು ಕುರಿತು ಯೋಚಿಸಬೇಕು. ನಿಜಕ್ಕೂ ಆ ಬಾಧೆ ಜೀವನದಲ್ಲಿ ಬರದಿದ್ದರೇ! ಬಾಧೆಯನ್ನು ಹೋಗಲಾಡಿಸಿ ಎಂದು ಬಯಸಬೇಕಾಗಿಲ್ಲವಲ್ಲ! ಇಷ್ಟವಾದ ದೇವರನ್ನು ಬಾಧೆಗೆ ಗುರಿ ಮಾಡಬೇಕಾದ ಅವಶ್ಯಕತೆ ಇಲ್ಲವಲ್ಲ?

ಮತ್ತೆ ಬಾಧೆ ಏತಕ್ಕಾಗಿ ಬಂದಿದೆ? ಅದು ನಾವು ಗತಜನ್ಮದಲ್ಲಿ ಅಥವಾ ಗತಜೀವನದಲ್ಲಿ ಮಾಡಿದ ಪಾಪಕರ್ಮಗಳಿಂದಲೇ ಬಂದಿದೆ. ಗತದಲ್ಲಿ ಪಾಪಕರ್ಮಗಳನ್ನು ಮಾಡಿದ್ದೇವೆ, ಯಾರನ್ನೋ ನೋಯಿಸಿರುತ್ತೇವೆ, ಅದು ಈಗ ಅನುಭವಿಸುತ್ತಿದ್ದೇವೆ. ಅದಕ್ಕೆ ಶಾಸ್ತ್ರಗಳು ಹೇಳುತ್ತವೆ **"ಪೂರ್ವ ಜನ್ಮಕೃತಂ ಪಾಪಂ ವ್ಯಾಧಿ ರೂಪೇಣ ಪೀಡ್ಯತೇ!"** ಎಂದು.

ಮತ್ತೆ ಯೋಚಿಸಿ, ಪಾಪಗಳೇ ಮಾಡದಿದ್ದರೇ ಬಾಧೆಗಳೇ ಇರುವುದಿಲ್ಲವಲ್ಲ? ಆಗ ನಮಗೆ ಇಷ್ಟವಾದ ದೇವರನ್ನು ಅವರ ಬಾಧೆಯನ್ನು ತೆಗೆದುಕೊಳ್ಳಿ ಎಂದು ಕೇಳಬೇಕಾದ ಅವಶ್ಯಕತೆ ಇಲ್ಲವಲ್ಲ? ಅವರನ್ನು ಬಾಧಿಸಬೇಕಾದ ಅವಶ್ಯಕತೆ ಇರುವುದಿಲ್ಲವಲ್ಲ? ಇದರಿಂದ ಗೊತ್ತಾಗುವುದು ಏನೆಂದರೆ ನಮಗೆ ಇಷ್ಟವಾದ ದೇವರನ್ನು ನೋಯಿಸಬಾರದೆಂದರೆ ತಾನು ಪಾಪಗಳನ್ನು ಮಾಡಬಾರದು. ಅಂದರೆ ಯಾರನ್ನೂ ಬಾಧಿಸಬಾರದು, ಹಿಂಸಿಸಬಾರದು.

ಆದ್ದರಿಂದ ನಿಜಕ್ಕೂ ಪಾಪ ಅಂದರೆ ಏನು? ಏನು ಮಾಡಿದರೆ ಪಾಪವಾಗುತ್ತದೆ?ಎನ್ನುವ ವಿಷಯಗಳನ್ನು ಕೂಲಂಕುಷವಾಗಿ ತಿಳಿದುಕೊಳ್ಳಬೇಕು. ಈ ದೃಷ್ಟಿಯಲ್ಲಿ ಯಾವ ಜೀವಿಗೂ ಅಂದರೆ ಮಾನವರಿಗಾಗಲಿ, ಪ್ರಾಣಿಗಳಿಗಾಗಲಿ, ಕಷ್ಟ, ನಷ್ಟ, ಬಾಧೆ, ಉಂಟುಮಾಡಿದರೆ ಅದನ್ನು ಪಾಪಕರ್ಮ ಎನ್ನುತ್ತಾರೆ. ಅದನ್ನೇ ಹಿಂಸೆ ಎಂದೂ ಸಹ ಹೇಳುತ್ತಾರೆ. ಆದರೆ ಹಿಂಸೆ ಮಾಡುವುದೇ ಪಾಪ. ಹಾಗೆ ನಾನು ಮಾಡಿದ ಪಾಪ, ಹಿಂಸೆ, ರೋಗರೂಪದಲ್ಲಿ ನಮ್ಮನ್ನು ಕಾಡುತ್ತವೆ. ಹಿಂಸೆ ಮಾಡುವುದೇಕೆ?ಹಿಂಸೆ ಅನುಭವಿಸುವುದೇಕೆ?

ಅದಕ್ಕೆ **"ಕೊಚ್ಚೆ ತುಳಿಯುವುದೇಕೆ, ಕಾಲುಗಳನ್ನು ತೊಳೆಯುವುದೇಕೆ"** ಎನ್ನುತ್ತಾರೆ. ಅಂದರೆ ಪಾಪ ಮಾಡುವುದೇಕೆ? ಬಾಧೆ ತೊಲಗಿಸಿ ಎಂದು ಪ್ರಾರ್ಥಿಸುವುದೇಕೆ? ಯೋಚಿಸಿ. ನಮಗೆ ಇಷ್ಟವಾದ ದೇವರುಗಳನ್ನು ಬಾಧಿಸಬೇಡ ಅವರು ನಮಗೆ ಪ್ರೀತಿಪಾತ್ರರು ಎನ್ನುತ್ತಾ ಕಷ್ಟಕೊಡುವುದು ನಮ್ಮ ಧರ್ಮವಲ್ಲ.

ನಿಜಕ್ಕೂ ಯಾರನ್ನೂ ಕಷ್ಟಕ್ಕೆ ಈಡುಮಾಡದಿದ್ದರೆ ನಮಗೆ ಕಷ್ಟಗಳೇ ಬರುವುದಿಲ್ಲವಲ್ಲ? ಆದ್ದರಿಂದ ಜೀವಹಿಂಸೆ ಮಾಡಬೇಡಿ. ಮಾಂಸಭಕ್ಷಣೆ ನಿಲ್ಲಿಸಿ. ಎಲ್ಲರನ್ನು ಪ್ರೀತಿಸಿ. ದೇವರಿಗೆ ಎಲ್ಲರೂ ಸಮಾನ. ಎಲ್ಲಾ ಆತನ ರೂಪಗಳೇ. ಆತನ ಮಕ್ಕಳೇ. ಯಾರನ್ನು ಹಿಂಸಿಸಿದರೂ ಆತನನ್ನು ಹಿಂಸಿಸಿದ ಹಾಗೆ ಎಂದು ತಿಳಿದುಕೊಳ್ಳಿ, ನಿಮ್ಮ ನೋವು ನಿಮಗೆ ಹೇಗೆ ಹಿಂಸೆಯನ್ನು ನೀಡುತ್ತದೆಯೋ ಹಾಗೆ ಇತರ ಪ್ರಾಣಿಗಳನ್ನು ಹಿಂಸಿಸಿದರೆ ಅವುಗಳಿಗೂ ಹಾಗೆ ನೋವು, ಬಾಧೆ, ಉಂಟಾಗುತ್ತದೆ ಎಂದು ತಿಳಿದುಕೊಳ್ಳಿ! ನಿಮ್ಮ ನೋವು ನೀವು ಅನುಭವಿಸಲಾರದಾಗ ಅವು ಅನುಭವಿಸಬಲ್ಲವಾ? ನೀವು ನಿಮ್ಮ ಇಷ್ಟ ದೇವರನ್ನು

ಪ್ರಾರ್ಥಿಸುತ್ತಿರುವಾಗ ಇತರ ಪ್ರಾಣಿಗಳು ಸಹ ಕಷ್ಟ ಬಂದಾಗ ಅವು ಸಹ ದೇವರನ್ನು ಪ್ರಾರ್ಥಿಸುವುದಿಲ್ಲವೆ? ಅವುಗಳಿಗೂ ಸಹ ಆತನೇ ದೈವವಲ್ಲವಾ?

ಇನ್ನೂ ಯೋಚಿಸಿ ಒಂದು ವೇಳೆ ಬಾಬಾರವರೇನಾದರೂ ನಿಮ್ಮ ಬಾಧೆಯನ್ನು ತೆಗೆದುಕೊಂಡರು ಎಂದುಕೊಳ್ಳೋಣ ಕನಿಷ್ಟ ಪಕ್ಷ ಇನ್ನು ಮುಂದೆ ಆದರೂ ಯಾರನ್ನೂ ನೋಯಿಸದೇ ಇರುತ್ತೀರಾ? ಪಾಪಗಳನ್ನು ಮಾಡದೇ ಇರುತ್ತೀರಾ? ಪ್ರಾಣಿಗಳನ್ನು ಕೊಲ್ಲದೇ ಇರುತ್ತೀರಾ? ಮಾಂಸಭಕ್ಷಣೆ ನಿಲ್ಲಿಸುತ್ತೀರಾ? ಇವೆಲ್ಲಾ ಬಿಡುವುದಿಲ್ಲವಲ್ಲ? ನಿಜಕ್ಕೂ ಹಿಂಸೆಯನ್ನು ಬಿಡದೇ ಬಾಧೆಯನ್ನು ತೊಲಗಿಸಿ ಎನ್ನುವ ಹಕ್ಕು ನಮಗೆಲ್ಲಿದೆ? ಹಾಗೆ ಹಿಂಸೆಯನ್ನು ಮಾಡುತ್ತಾ ಬಾಧೆಗಳನ್ನು ತೆಗೆದುಕೊಳ್ಳುತ್ತಿದ್ದರೆ ಬಾಬಾ ನಿಮ್ಮ ಬಾಧೆಗಳನ್ನು ತೊಲಗಿಸುತ್ತಾ ತಾವು ಅನುಭವಿಸುತ್ತಿರುತ್ತಾರಾ? ಇದೇನಾ ಬಾಬಾ ಕೆಲಸ? ನಿಜಕ್ಕೂ ಎಷ್ಟು ಜನರ ಬಾಧೆಗಳನ್ನು ಬಾಬಾ ಅನುಭವಿಸಬಲ್ಲರು? ನಮ್ಮ ಒಬ್ಬರ ಬಾಧೆಯನ್ನೇ ನಾವು ಅನುಭವಿಸಲಾರದೇ ಪ್ರಾರ್ಥಿಸುತ್ತಿದ್ದೇವೆ. ಮತ್ತೆ ಇಷ್ಟು ಜನ ಇಷ್ಟು ಸಾವಿರಾರು ಜನ ಇಷ್ಟು ಲಕ್ಷಾಂತರ ಜನರ ಬಾಧೆಗಳು ಬಾಬಾ ಅನುಭವಿಸಬಲ್ಲರಾ? ಎಲ್ಲರ ಬಾಧೆಗಳನ್ನು ಅವರು ತೆಗೆದುಕೊಂಡರೆ ಅವರ ಪರಿಸ್ಥಿತಿ ಏನು? ಯಾರೊ ಒಬ್ಬರ ಬಾಧೆ ಅನುಭವಿಸಬಲ್ಲರೆ ವಿನಹ ಎಲ್ಲರ ನೋವು ಹೇಗೆ ಅನುಭವಿಸಬಲ್ಲರು?

ಇನ್ನೂ ಯೋಚಿಸಿ ಅವರು ಜೀವಿಸಿ ಇರುವಾಗ ಅಂದರೆ ಶರೀರದಿಂದ ಇರುವಾಗ ಭಕ್ತನ ಶರೀರ ಬಾಧೆ ತನ್ನ ಶರೀರದಿಂದ ಅನುಭವಿಸಿದರು. ಆದರೆ ಪ್ರಸ್ತುತದಲ್ಲಿ ಬಾಬಾರವರಿಗೆ ಶರೀರ ಇಲ್ಲವಲ್ಲ? ಹೇಗೆ ತೆಗೆದುಕೊಳ್ಳುತ್ತಾರೆ? ಹೇಗೆ ಅನುಭವಿಸುತ್ತಾರೆ? ಅದು ಸಾಧ್ಯವಾ? ಆ ಅವಕಾಶ ಬಾಬಾಗೆ ಈಗ ಇಲ್ಲವಲ್ಲ? ಆದ್ದರಿಂದ ಅವರವರ ಕರ್ಮಗಳು ಅವರವರೇ ಅನುಭವಿಸಬೇಕಾದ್ದೆ. ಬಾಬಾ ಇದ್ದಾರೆ ನಮ್ಮ ಬಾಧೆಗಳನ್ನು ಹೋಗಲಾಡಿಸುತ್ತಾರೆ ಪರವಾಗಿಲ್ಲ

ಎಂದುಕೊಳ್ಳುತ್ತಾ ಹಿಂಸೆ ಮಾಡುತ್ತಾ, ಪಾಪಗಳನ್ನು ಮಾಡಿಕೊಳ್ಳುತ್ತಾ, ಹೋದರೆ ಖಂಡಿತ ಬಾಧೆಗಳನ್ನು ಅನುಭವಿಸಬೇಕಾಗುತ್ತದೆ. ಜೀವನ ದುರ್ಭರವಾಗುತ್ತದೆ. ಆದ್ದರಿಂದ ಹಿಂಸೆ ಮಾಡಬೇಡಿ, ಪಾಪಗಳನ್ನು ಮಾಡುವುದನ್ನು ಬಿಡಿ.

ಸ್ವಲ್ಪ ಯೋಚಿಸಿ **"ಬಾಧಿಸುವುದು ಏಕೆ? ಬಾಧೆಗಳನ್ನು ತೆಗೆದುಕೊಳ್ಳಿ ಎಂದು ಪ್ರಾರ್ಥಿಸುವುದು ಏಕೆ? ಇತರರ ಶರೀರವನ್ನು ಬಾಧಿಸುವುದು ಏಕೆ? ನಿನ್ನ ಶರೀರಕ್ಕೆ ಬಾಧೆ ತಂದುಕೊಳ್ಳುವುದೇಕೆ? ಬಾಧಿಸದೇ ಇದ್ದರೆ ಬಾಧೆ ಇರುವುದಿಲ್ಲವಲ್ಲ!** ಆದ್ದರಿಂದ ಆಲೋಚಿಸಿ, ಹಿಂಸೆಬಿಡಿ. ಇಷ್ಟವಾದ ದೇವರುಗಳನ್ನು ಬಾಧಿಸುವ ಕೆಲಸಗಳನ್ನು ಮಾಡಬೇಡಿ. ಇದು ಒಂದು ಬಾಬಾಗೆ ಅಲ್ಲ ಎಲ್ಲಾ ದೇವರುಗಳಿಗೂ ವರ್ತಿಸುತ್ತದೆ. ಎಲ್ಲರಿಗೂ ವರ್ತಿಸುತ್ತದೆ ತಿಳಿದುಕೊಳ್ಳಿ. ಗತಕಾಲದಲ್ಲಿ ನಾವು ತಿಳಿದೊ ತಿಳಿಯದೆನೋ ಪಾಪಗಳನ್ನು ಮಾಡಿದ್ದೇವೆ. ಅದು ಅನುಭವಿಸುತ್ತಿದ್ದೇವೆ. ಆ ಬಾಧೆಗಳನ್ನು ಸಹಿಸಲಾರದೇ ಬಾಧೆಗಳನ್ನು ತೆಗೆದುಕೋ ಎಂದು ದೇವರುಗಳನ್ನು ಪ್ರಾರ್ಥಿಸುತ್ತಿದ್ದೇವೆ. ಹಾಗೆ ಪ್ರಾರ್ಥಿಸುವುದಲ್ಲ ಪಾಪಕರ್ಮಗಳು ಹೋಗುವ ಮಾರ್ಗ ತಿಳಿದುಕೊಳ್ಳಬೇಕು. ಆ ಸಾಧನೆ ಮಾಡಬೇಕು. ಆ ಸಾಧನೆಯೇ 'ಧ್ಯಾನ' ಧ್ಯಾನ ಮಾಡಿದರೆ ನಮ್ಮ ಪಾಪಗಳು ನಾವೇ ತೊಲಗಿಸಿಕೊಳ್ಳಬಲ್ಲೆವು. ಅಂದರೆ ನಮ್ಮನ್ನು ನಾವು ಉದ್ಧರಿಸಿಕೊಳ್ಳುತ್ತೇವೆ. ಇದೇ ಅಲ್ಲವೇ ಭಗವದ್ಗೀತೆಯ ಸಂದೇಶ. "ಉದ್ಧರೇದಾತ್ಮನಾತ್ಮಾನಂ" ಆದ್ದರಿಂದ ಹಿಂಸೆ ಬಿಡಿ ಅಂದರೆ ಮಾಂಸಭಕ್ಷಣೆ ಬಿಡಿ. ಧ್ಯಾನ ಮಾಡಿ. ಅವರ ಮಾರ್ಗದಲ್ಲಿ ನಡೆಯಿರಿ. ಅಷ್ಟೇ ವಿನಹ ಇಷ್ಟವಾದ ದೇವರುಗಳನ್ನು ಬಾಧಿಸಬೇಡಿ ಕಷ್ಟಕೊಡಬೇಡಿ.

# ಕೊಡದೇ ಇರುವವರಿಗೆ ಕೇಳುವ ಹಕ್ಕಿಲ್ಲ

ಅನೇಕ ಜನ ಗುಡಿಗೋ, ಮಂದಿರಕ್ಕೋ, ಚರ್ಚಿಗೋ, ಮಸೀದಿಗೋ, ಹೋಗಿ ತಮಗೆ ಇಷ್ಟವಾದ ದೇವರನ್ನು, ತಮಗೆ ಬೇಕಾಗಿರುವುದನ್ನು, ಬೇಡುತ್ತಾರೆ. ಪ್ರಾರ್ಥಿಸುತ್ತಾರೆ. ಆದರೆ ಜನ ಅದಕ್ಕಿಂತಾ ಹೆಚ್ಚು ಯೋಚಿಸುವುದಿಲ್ಲ.

ಏಕೆಂದರೆ ಅವರು ಹಾಗೆ ಕೋರುತ್ತಾರೆ ಆದರೆ ಅವರು ಕೋರಿಕೊಳ್ಳುವುದು ಯಾವುದು ಇತರರಿಗೆ ಈ ಜಗತ್ತಿನಲ್ಲಿ ನೀಡುವುದಿಲ್ಲ. ಗಮನಿಸಿದರೆ ಆನಂದವನ್ನು ಬಯಸುತ್ತಾರೆ. ಆದರೆ ಅದೆಷ್ಟು ಜನಕ್ಕೆ ಆನಂದವನ್ನು ಉಂಟುಮಾಡುತ್ತಿದ್ದಾರೆ? ಆನಂದವಾಗಿ ಜೀವಿಸಲು ಬಿಡುತ್ತಿದ್ದಾರೆ? ಶಾಂತಿಯನ್ನು ಬಯಸುತ್ತಾರೆ. ಅಂದರೆ ಸ್ವಾಮಿ, ತಂದೆ, ನನಗೆ ಮನಶಾಂತಿಯನ್ನು ಕಲ್ಪಿಸಿ, ಶಾಂತಿಯಿಂದ ಜೀವಿಸುವ ಹಾಗೆ ಮಾಡು ಪ್ರಭು ಎಂದು ಪ್ರಾರ್ಥಿಸುತ್ತಾರೆ. ಆದರೆ ತಾವು ಮಾತ್ರ ಲೋಕದಲ್ಲಿ ಎಷ್ಟು ಜನರನ್ನು ಜೀವಿಸಲು ಬಿಟ್ಟಿದ್ದಾರೋ ಯೋಚಿಸುವುದಿಲ್ಲ. ನಿಜಕ್ಕೂ ಎಷ್ಟು ಜನರನ್ನು ಶಾಂತಿಯಿಂದ ಜೀವಿಸಲು ಬೀಡುತ್ತಿದ್ದಾರೆ? ಮನೆ ಹಿಂದೆ ಅಂಗಳದಲ್ಲಿ ಕೋಳಿಯನ್ನು ಶಾಂತಿಯಿಂದ ತಿರುಗಾಡಲು ಬಿಡುತ್ತಿದ್ದಾರಾ? ಕೆರೆಯಲ್ಲಿ ಮೀನುಗಳನ್ನು ಶಾಂತಿಯಿಂದ ಈಜಾಡಲು ಬಿಡುತ್ತಿದ್ದಾರಾ? ಮೇಕೆಯನ್ನು ತನ್ನ ಮಕ್ಕಳ ಜೊತೆ ಶಾಂತಿಯಿಂದ ಜೀವಿಸಲು ಬಿಡುತ್ತಿದ್ದಾರಾ? ಇವೆಲ್ಲಾ ಯೋಚಿಸದೇ ದೇವರನ್ನು ಮಾತ್ರ ಶಾಂತಿಯನ್ನು ಪ್ರಸಾದಿಸು ಎಂದು ಬೇಡುತ್ತಾರೆ.

ಅಷ್ಟೇಅಲ್ಲ ದಯೆ ತೋರಿಸೆಂದು ಮೇಲೆ ಇರುವವರನ್ನು (ಭಗವಂತನನ್ನು) ಬೇಡುತ್ತಾರೆ. ಆದರೆ ಅವರ ಕೆಳಗೆ ಇರುವವರ ಮೇಲೆ, ತನ್ನ ಕೆಳಮಟ್ಟದಲ್ಲಿರುವ ಜೀವಿಗಳ ಮೇಲೆ ದಯೆ ತೋರಿಸುವುದಿಲ್ಲ. ಕರುಣಿಸಿ ತಂದೆ ಅನ್ನುತ್ತಾರೆ. ಆದರೆ ಅವರ ಕೆಳಗೆ ಇರುವವರ ಮೇಲೆ ಕರುಣೆ ತೋರಿಸುವುದಿಲ್ಲ. ಅನುಗ್ರಹಿಸು ತಂದೆ ಎನ್ನುತ್ತಾರೆ. ಆದರೆ ಇವರು ಮಾತ್ರ ಯಾರನ್ನು ಅನುಗ್ರಹಿಸಿದ್ದಾರೆ? ಎಷ್ಟು ಜನ ಇವರ ಅನುಗ್ರಹವನ್ನು ಹೊಂದಿದ್ದಾರೆ? ಎಂದು ಯೋಚಿಸುವುದಿಲ್ಲ. ಹಾಗೆಯೇ ಸಂಪತ್ತನ್ನು ಬೇಡುತ್ತಾರೆ. ಆದರೆ ಅವರಿಗೆ ಕೂಡಾ ಲಾಭದ ಹಣದಲ್ಲಿ ಲೋಕಕ್ಕೆ ಎಷ್ಟು ಶೇಕಡಾ ಇತರರಿಗೆ ನೀಡಿದ್ದಾರೆ? ಹೀಗೆ ಯೋಚಿಸುತ್ತಾ ಹೋದರೆ ಪ್ರತಿ ಒಬ್ಬರೂ ದೇವರನ್ನು ಕೋರಿಕೊಳ್ಳುವವರೇ ವಿನಹ ಎಲ್ಲರೂ ದೇವರ ಮಕ್ಕಳೆಂದು ಆ ದೇವರ ಮಕ್ಕಳಾದ ಇತರರನ್ನು ಕುರಿತು ಯೋಚಿಸುವುದಿಲ್ಲ. ದೇವರಿಗೆ ತನ್ನ ಜೊತೆ ಅವರು ಕೂಡಾ ಸಮಾನವೆಂದು ತಿಳಿದುಕೊಳ್ಳುವುದಿಲ್ಲ. ತನ್ನ ಸಹ ಜೀವಿಗಳಿಗೆ ಅಂದರೆ ಮಾನವರಿಗೆ, ಪ್ರಾಣಿಗಳಿಗೆ, ಕನಿಷ್ಟಪಕ್ಷ ಅಕ್ಕ–ಪಕ್ಕ ಇರುವವರಿಗಾದರೂ ತಾನು ಏನನ್ನು ಬಯಸುತ್ತಿದ್ದಾನೋ ಅವು ಕೊಡಲು ಪ್ರಯತ್ನಿಸುವುದಿಲ್ಲ.

ಮತ್ತೆ ನೀವೇ ಸ್ವಲ್ಪ ಯೋಚಿಸಿ ಹಾಗೆ ಇತರರಿಗೆ ಏನನ್ನು ಕೊಡದೇ ಇರುವವನಿಗೆ ಕೇಳುವ ಹಕ್ಕು ಎಲ್ಲಿದೆ? ಆದ್ದರಿಂದ ಕೇಳುವುದಕ್ಕಿಂತಾ ಮುಂಚೆ ನಾನು ಕೊಡುತ್ತಿದ್ದೀನಾ? ಕೊಟ್ಟಿದ್ದೀನಾ? ಎಂದು ಯೋಚಿಸಬೇಕು. ಕಾರಣ ಕೊಡುವುದೇ ಮಾನವ ಧರ್ಮ. 'ಸೃಷ್ಟಿಧರ್ಮ' ಇದನ್ನೇ 'ಧಾನಧರ್ಮ' ಎನ್ನುತ್ತಾರೆ. ಅಷ್ಟೇ ಅಲ್ಲ ಭಗವಂತನ ಲೋಕದಲ್ಲಿ ಕೊಡುವವನು ಕೇಳಬೇಕಾದ ಅವಶ್ಯಕತೆ ಕೂಡಾ ಇಲ್ಲ. ಕಾರಣ ಕೇಳಿದರೇನೆ ಕೊಡುತ್ತಾನೆ

ಎಂದುಕೊಳ್ಳುವುದು ಮೂರ್ಖತನ, ಅಜ್ಞಾನ. **"ಭಗವಂತನ ಲೋಕದಲ್ಲಿ ಕೊಟ್ಟರೇ ಸಾಕು ಕೇಳಬೇಕಾದ ಅವಶ್ಯಕತೆ ಇಲ್ಲದೇನೆ ಬರುತ್ತದೆ. ಕೊಡದಿದ್ದರೆ ಬೇಡಿದರೂ ಸಹ ಬರುವುದಿಲ್ಲ".** ಇದು ತುಂಬಾ ಮುಖ್ಯವಾದ ಧರ್ಮ. ಆದ್ದರಿಂದ ಕೊಡುವುದನ್ನು ಕಲಿಯಿರಿ ಬೇಡುವುದಲ್ಲ.

ಅಷ್ಟೇ ಅಲ್ಲ "ಈ ಸೃಷ್ಟಿಯಲ್ಲಿ ಏನನ್ನು ಕೊಟ್ಟರೆ ಅದು ಬರುತ್ತದೆ. ಎಷ್ಟು ಕೊಟ್ಟರೇ ಅಷ್ಟೇ ಬರುತ್ತದೆ" ಎಂದು ತಿಳಿದುಕೊಂಡು ನಿನಗೆ ಏನು ಬೇಕೋ ಅದು ಕೊಡಲು ಪ್ರಯತ್ನಿಸಬೇಕು. ನಿನಗೆ ಆನಂದ ಬೇಕಾದರೇ ಎಲ್ಲರಿಗೂ ಆನಂದವನ್ನು ಉಂಟುಮಾಡುವ ಕೆಲಸಗಳನ್ನು ಮಾಡಬೇಕು. ನೀನು ಶಾಂತಿಯಿಂದ ಜೀವಿಸಲು ಬಿಡು. ಹಣ ಬೇಕಾದರೇ ಹಣವನ್ನು ಹಂಚು. ಗೌರವ ಬೇಕಾದರೇ ಎಲ್ಲರನ್ನು ಗೌರವಿಸು. ದಯೆ ಬೇಕಾದರೆ ಎಲ್ಲರ ಮೇಲೆ ದಯೆ ತೋರಿಸು.

ಹಾಗೆಯೇ ಹಿಂಸೆ ಬೇಡ ಅನಿಸಿದರೆ ಯಾವ ಜೀವಿಯನ್ನು, ಯಾವ ಪ್ರಾಣಿಯನ್ನು ಹಿಂಸಿಸಬೇಡ, ಕೊಲ್ಲಬೇಡ, ಅವುಗಳ ಮಾಂಸವನ್ನು ಭಕ್ಷಿಸಬೇಡ, ಅವಮಾನ ಬೇಡವೆನಿಸಿದರೇ ಯಾರನ್ನು ಅವಮಾನಿಸಬೇಡ, ನಷ್ಟ ಬೇಡವೆನಿಸಿದರೇ! ಯಾರಿಗೂ ನಷ್ಟಗೊಳಿಸಬೇಡ. ಕಷ್ಟಬೇಡವೆನಿಸಿದರೇ ಯಾರಿಗೂ ಕಷ್ಟಕೊಡಬೇಡ. ನಿನ್ನ ವಸ್ತುಗಳನ್ನು ಯಾರೂ ಅಪಹರಿಸಬಾರದೆಂದರೆ ನೀನು ಸಹ ಯಾರ ವಸ್ತುಗಳನ್ನು ಅಪಹರಿಸಬೇಡ. ಅಂದರೆ ನಿನಗೆ ಯಾವುದು ಬೇಡವೆನಿಸಿದರೇ ಅವು ನೀನು ಯಾರಿಗೂ ಕೊಡಬೇಡ. ಏನು ಬೇಕೆನಿಸಿದರೆ ಅದು ಕೊಡು. ಇದೇ ಸೃಷ್ಟಿಧರ್ಮ. ಆದ್ದರಿಂದ ತಿಳಿದುಕೊಳ್ಳಿ. ಈ ಸೃಷ್ಟಿಯಲ್ಲಿ "ಕೊಡದೇ ಇರುವವನಿಗೆ ಕೇಳುವ ಹಕ್ಕಲ್ಲ. ಕೊಡುವವನು ಕೇಳಬೇಕಾದ ಅವಶ್ಯಕತೆ ಇಲ್ಲ"

•



# ಧ್ಯಾನ ಮಾಡುವ ಪದ್ಧತಿ
# ಶ್ವಾಸದ ಮೇಲೆ ಧ್ಯಾಸ



ಸುಖಾಸನದಲ್ಲಿ ಹಾಯಾಗಿ ಕುಳಿತುಕೊಂಡು... ಎರಡು ಕೈಗಳನ್ನು ಜೋಡಿಸಿ... ಎರಡು ಕಣ್ಣುಗಳನ್ನು ಮುಚ್ಚಿಕೊಂಡು... ಪ್ರಕೃತಿ ಸಹಜವಾಗಿ ನಡೆಯುತ್ತಿರುವ ಉಚ್ವಾಸ, ನಿಶ್ವಾಸಗಳನ್ನು ಗಮನಿಸುತ್ತಿರಬೇಕು!

ಮಧ್ಯ ಮಧ್ಯದಲ್ಲಿ ಅನೇಕಾನೇಕ ಆಲೋಚನೆಗಳು ಬರುತ್ತಿದ್ದರೂ ಅವುಗಳನ್ನು ಆಗಿಂದಾಗ 'ಕಟ್' ಮಾಡುತ್ತಾ... ಪುನಃ-ಪುನಃ ಶ್ವಾಸದ ಮೇಲೆ ಗಮನಿಸುತ್ತಿದ್ದರೆ ಕ್ರಮೇಣ... ಆಲೋಚನಾರಹಿತ ಸ್ಥಿತಿ ಉಂಟಾಗುತ್ತದೆ. ಚಿತ್ತವೃತ್ತಿಗಳೂ ನಿರೋಧಿಸಲ್ಪಡುತ್ತದೆ... ಮನಸ್ಸು ಶೂನ್ಯ ಆಗಿಬಿಡುತ್ತದೆ. ಮನಸ್ಸು ಶಾಂತಿಸುತ್ತದೆ. ಇದೇ ಧ್ಯಾನ ಸ್ಥಿತಿ.

ಈ ಆಲೋಚನಾ ರಹಿತ ಸ್ಥಿತಿಯಲ್ಲಿ ಕಲ್ಪಿಸುವ ಅನೇಕಾನೇಕ ಶಾರೀರಿಕ, ನಾಡೀ ಮಂಡಲ, ಆತ್ಮಾನುಭವಗಳನ್ನು ಗಮನಿಸುತ್ತಿರಬೇಕು. ಆ ಸ್ಥಿತಿಯಲ್ಲಿ ವಿಶ್ವಮಯ ಪ್ರಾಣಶಕ್ತಿ, ಅಪಾರವಾಗಿ ಶರೀರದಲ್ಲಿ ಪ್ರವೇಶಿಸಿ ನಾಡೀ ಮಂಡಲವನ್ನು ಶುದ್ಧಿ ಮಾಡುತ್ತದೆ. ಆ ಶಕ್ತಿಯಿಂದ ರೋಗಗಳೆಲ್ಲಾ ಕಡಿಮೆ ಆಗುತ್ತದೆ. ನಾಡೀ ಮಂಡಲ ಶುದ್ಧಿಯಿಂದ ಕರ್ಮಗಳು ತೊಲಗುತ್ತವೆ.

ಪ್ರತಿ ದಿನ ಯಾರ ವಯಸ್ಸು ಎಷ್ಟು ಇರುತ್ತದೆಯೋ... ಕನಿಷ್ಟ ಪಕ್ಷ ಅಷ್ಟು ನಿಮಿಷಗಳು... ತಪ್ಪದೇ... ದಿನಕ್ಕೆ ಎರಡು ಬಾರಿ... ಧ್ಯಾನ ಮಾಡಬೇಕು.

# ನವವಿಧ ಭಕ್ತಿಗಳು

ಭಗವಂತನನ್ನು ಆರಾಧಿಸಲು, ಹಾಗೆಯೇ ಮುಕ್ತಿ ಹೊಂದಲಿಕ್ಕಾಗಿ ಒಂಬತ್ತು ಬಗೆಯ ಭಕ್ತಿಗಳಿವೆ ಎಂದು ಅನೇಕ ಜನ ಭಾವಿಸುತ್ತಿರುತ್ತಾರೆ. ಆದ್ದರಿಂದ ಯಾವುದೋ ಒಂದು ಬಗೆಯ ಮೂಲಕ ಭಗವಂತನನ್ನು ಆರಾಧಿಸಬಹುದೆಂದು ಭಾವಿಸುತ್ತಾ ಈ ಒಂಭತ್ತರಲ್ಲಿ ಯಾವ ಮಾರ್ಗವನ್ನು ಅನುಸರಿಸಿದರೂ ಸಾಕು ಎಂದುಕೊಳ್ಳುತ್ತಾರೆ.

ಆದರೆ ನವವಿಧ ಭಕ್ತಿಗಳು ಅಂದರೆ "ಒಂಬತ್ತು ವಿಧಗಳಲ್ಲಿ ಯಾವುದೋ ಒಂದಲ್ಲ ಒಂಬತ್ತು ವಿಧಗಳ ಮೂಲಕ ಆರಾಧಿಸಬೇಕು". ಈ ಒಂಬತ್ತು ಬಗೆಯ ಭಕ್ತಿ ಮಾರ್ಗಗಳನ್ನು ಆಚರಿಸಿದವನೇ ಶೀಘ್ರವಾಗಿ ಭಗವಂತನನ್ನು ಸೇರಬಲ್ಲನು. ಮುಕ್ತಿಯನ್ನು ಹೊಂದಬಲ್ಲನು. ಮುಂಚಿತವಾಗಿ ಈ ನವವಿಧ ಭಕ್ತಿಗಳು ಅಂದರೆ ಏನು ನೋಡೋಣ. 1)ಶ್ರವಣ, 2)ಕೀರ್ತನೆ, 3)ಸ್ಮರಣೆ, 4)ಪಾದ ಸೇವೆ, 5)ಅರ್ಚನೆ, 6)ನಮಸ್ಕಾರ, 7)ಧ್ಯಾಸ, 8)ಸಖ್ಯ, 9)ಆತ್ಮನಿವೇದನೆ.

ಯಾರಾದರೂ ಮೋಕ್ಷವನ್ನು ತ್ವರಿತಗತಿಯಲ್ಲಿ ಹೊಂದಬೇಕಾದರೆ ಈ ಒಂಬತ್ತು ಅವಶ್ಯಕವೇ. ಸ್ವಲ್ಪ ವಿವರವಾಗಿ ತಿಳಿದುಕೊಳ್ಳೋಣ.

**1) ಶ್ರವಣ (ಕೇಳಿಸಿಕೊಳ್ಳುವುದು) :–** ಪ್ರಾರಂಭದಲ್ಲಿ ಯಾರಿಗಾದರೂ ಭಗವಂತನನ್ನು ಕುರಿತು ತಿಳಿಯದು ಆದ್ದರಿಂದ ಮೊದಲು ಭಗವಂತನನ್ನು ಕುರಿತು ತಿಳಿದುಕೊಳ್ಳಬೇಕು.

ಅಂದರೆ ಆ ವಿಷಯಗಳನ್ನು ಯಾರಾದರೂ ಹೇಳುತ್ತಿರುವಾಗ ಕೇಳಿಸಿಕೊಳ್ಳಬೇಕು. ಹಾಗೆ ಕೇಳುತ್ತಿದ್ದರೆ ನಿಧಾನವಾಗಿ ಭಗವಂತನೆನ್ನುವವನು ಒಬ್ಬನಿದ್ದಾನೆಂದು ಅವಗಾಹನೆ ಉಂಟಾಗುತ್ತದೆ. ಹಾಗೆ ಭಗವಂತನನ್ನು ಕುರಿತು ಅವಗಾಹನಕ್ಕಾಗಿ ಶ್ರವಣ ಎನ್ನುವುದು ತುಂಬಾ ಮುಖ್ಯ.

**2) ಕೀರ್ತನೆ :–** ಅಂದರೆ ಕೀರ್ತಿಸುವುದು. ಅಂದರೆ ಭಗವಂತನನ್ನು ಹೊಗಳುವುದು. ಅಂದರೆ ಆತನ ಹಿರಿತನವನ್ನು, ಆತನ ವಿಶಿಷ್ಠತೆಯನ್ನು, ಆತನ ಶಕ್ತಿಯನ್ನು, ಕೀರ್ತನೆಗಳ ಮೂಲಕ, ಸ್ತೋತ್ರಗಳ ಮೂಲಕ, ಪಾರಾಯಣದ ಮೂಲಕ, ತಿಳಿದುಕೊಳ್ಳುವುದು. ಉದಾಹರಣೆಗೆ ವಿಷ್ಣು ಸಹಸ್ರನಾಮ ಸ್ತೋತ್ರ, ಲಲಿತಾ ಸಹಸ್ರನಾಮ ಸ್ತೋತ್ರ, ಅಂದರೆ ಭಗವಂತನ ದೊಡ್ಡತನವನ್ನು ಸಾವಿರಾರು ರೀತಿಯಲ್ಲಿ ಸಾವಿರ ನಾಮಗಳಿಂದ ವರ್ಣಿಸುವುದು. ಹೀಗೆ ಕೀರ್ತಿಸುವುದರಿಂದ, ಪಾರಾಯಣ ಮಾಡುವುದರಿಂದ, ಆತ ದೊಡ್ಡವನೆಂದು ತಿಳಿದುಬರುತ್ತದೆ. ಆದರೆ ಆತನನ್ನು ಸೇರಲು ಮುಕ್ತಿಯನ್ನು ಪಡೆಯಲು ಇದೂ ಕೂಡಾ ಸಾಲುವುದಿಲ್ಲ.

**3) ಸ್ಮರಣೆ :–** ಇದನ್ನೇ ಮನನ ಎಂದು ಕೂಡಾ ಹೇಳುತ್ತಾರೆ. ಪುನಃ–ಪುನಃ ಸ್ಮರಿಸಬೇಕು. ಅಂದರೆ ಮನನ ಮಾಡುತ್ತಿರಬೇಕು. ಇದನ್ನೇ ಜಪಿಸುವುದೆಂದು ಹೇಳುತ್ತಾರೆ. ಏಕೆಂದರೆ ಅಂತಹ ಮಹಾತ್ಮನಾದ ಭಗವಂತನನ್ನು ಮರೆತು ಹೋದರೆ ಮುಕ್ತಿ ಹೇಗೆ ಸಿಗುತ್ತದೆ. ಆದ್ದರಿಂದ ಪುನಃ–ಪುನಃ ಭಗವಂತನನ್ನು ಸ್ಮರಿಸುವುದರ ಮೂಲಕ ನೆನಪಿನಲ್ಲಿಟ್ಟುಕೊಳ್ಳಬೇಕು. ಮತ್ತೆ ಹಾಗೆ ಜ್ಞಾಪಕದಲ್ಲಿಟ್ಟುಕೊಂಡರೆ ಸಾಕಾ? ಅಂದರೆ ಅದು ಕೂಡಾ ಸರಿಹೋಗುವುದಿಲ್ಲ ಅವುಗಳ ಜೊತೆ ಇನ್ನೂ ಕೆಲವು ಆಚರಿಸಬೇಕು.

**4) ಪಾದಸೇವೆ:–** ನಾನು ಭಗವಂತನ ಸೇವಕನು ಎಂದು ಭಾವಿಸುತ್ತಾ, ಆತನ ರೂಪವಾದ ಈ ಜಗತ್ತಿಗೆ ಅಂದರೆ ಈ ಜಗತ್ತಿನಲ್ಲಿರುವ ಎಲ್ಲಾದಕ್ಕೂ ಸೇವೆ ಮಾಡಬೇಕು. ಅಂತಹ ಭಾವನೆಯಿಂದ ಸೇವೆ ಮಾಡಬೇಕು.

ಪವಿತ್ರವಾದ ಭಾವನೆಯಿಂದ ಪಾದಗಳಿಗೆ ಹೇಗೆ ಸೇವೆ ಮಾಡುತ್ತೇವೋ ಅಷ್ಟೇ ಪವಿತ್ರ ಭಾವನೆಯಿಂದ ಲೋಕಕ್ಕೆ ಸೇವೆ ಮಾಡಬೇಕು. ಮುಖ್ಯವಾಗಿ ಭಗವಂತನೆಂದರೆ ಒಂದು ಬೊಂಬೆ ಅಥವಾ ಒಂದು ರೂಪವೆಂದು ಭಾವಿಸಬಾರದು. ಎಲ್ಲಾ ಭಗವಂತನೇ ಎಂದು ತಿಳಿದುಕೊಳ್ಳಬೇಕು. ಆ ಭಾವನೆಯಿಂದಲೇ ಸೇವೆ ಮಾಡಬೇಕು.

**5) ಅರ್ಚನೆ :–** ಇದನ್ನೇ ಆರಾಧನೆ ಭಾವನೆ ಎನ್ನುತ್ತಾರೆ. ಅಂತಹ ದೊಡ್ಡವನಾದ ಭಗವಂತನನ್ನು ಕುರಿತು ಆರಾಧನೆಯ ಭಾವನೆ ಹೊಂದಿರಬೇಕು ಆತನನ್ನು ಕುರಿತು ಅವರ ಸರ್ವವ್ಯಾಪಕ ತತ್ವವನ್ನು ಕುರಿತು ತಿಳಿದುಕೊಳ್ಳಬೇಕು. ಎಲ್ಲಾ ಆತನ ರೂಪಗಳೇ ಎನ್ನುವುದನ್ನು ತಿಳಿದುಕೊಳ್ಳಬೇಕು. ಎಲ್ಲರ ಕುರಿತು ಆರಾಧನಾ ಭಾವನೆಯಿಂದ ಪ್ರರ್ವತಿಸಬೇಕು.

**6) ವಂದನೆ :–** ಇದನ್ನೇ ವಿನಯ ಎಂದು ಹೇಳುತ್ತಾರೆ. ಭಗವಂತನ ವಿಷಯದಲ್ಲಿ ವಿನಯ ವಿಧೇಯತೆಯಿಂದ ನಡೆದುಕೊಳ್ಳಬೇಕು. ಅಂದರೆ ಪ್ರತಿ ಒಬ್ಬರ ಕುರಿತು ವಿನಯವನ್ನು ಪ್ರದರ್ಶಿಸಬೇಕು. ವಿಧೇಯತೆ ಹೊಂದಿರಬೇಕು. ಹಾಗೆ ಯಾರು ಪ್ರವರ್ತಿಸುತ್ತಾರೆಯೋ ಅವರು ಭಗವಂತನಿಗೆ ಹತ್ತಿರವಾಗಬಲ್ಲರು. ಭಗವಂತನಿಗೆ ಹತ್ತಿರವಾಗುತ್ತಿದಂತೆ ಮುಕ್ತಿಗೆ ಹತ್ತಿರವಾದ ಹಾಗೆ.

**7) ಧ್ಯಾಸ :–** ಇದನ್ನೇ ಸೇವೆ ಎನ್ನುತ್ತಾರೆ. ಮೇಲೆ ಹೇಳಿರುವ ವಿಷಯಗಳ ಜೊತೆ ಸೇವೆ ಮಾಡಬೇಕು. ಅದೇ ಭಗವಂತನಿಗೆ ಆನಂದವನ್ನು ಉಂಟುಮಾಡುವುದು. ಭಗವಂತನಿಗೆ ಸೇವೆ ಮಾಡುವುದು ಹೇಗೆ? ಎಲ್ಲ ಭಗವಂತನ ರೂಪಗಳೇ ಆದ್ದರಿಂದ ಎಲ್ಲಾದ್ದಕ್ಕೂ ಎಲ್ಲಾರಿಗೂ ಸೇವೆ ಮಾಡಬೇಕು. ಒಂದು ಗಿಡವನ್ನು ಚೆನ್ನಾಗಿ ಪೋಷಿಸಿದರೆ ಅದು ಗಿಡಕ್ಕೆ ಮಾಡಿದ ಸೇವೆ. ಒಂದು ಹಸುವಿಗೆ ಯಾವ ಸಮಯಕ್ಕೆ ಏನು ಬೇಕೋ ಅದು ನೀಡಿದರೆ ಅದು ಪ್ರಾಣಿಗೆ ಮಾಡಿದ ಸೇವೆ. ಹಾಗೆಯೇ ತಂದೆ–ತಾಯಿಗಳಿಗೆ, ಇತರ ಕುಟುಂಬ ಸದಸ್ಯರಿಗೆ ಏನು ಕಡಿಮೆ ಆಗದೇ ಇರುವ ಹಾಗೆ ನೋಡಿಕೊಂಡರೆ ಅದು ತಂದೆ–ತಾಯಿಗಳಿಗೆ ಮಾಡಿದ ಸೇವೆ. ಹಾಗೆಯೇ ಎಲ್ಲಾರಿಗೂ ಮಾಡುವ ಸೇವೆಯೇ ಭಗವಂತನಿಗೆ ಮಾಡುವ ಸೇವೆ ಆಗುತ್ತದೆ. ಅದಕ್ಕೆ "ಮಾನವ ಸೇವೆಯೇ ಮಾಧವ ಸೇವೆ" ಎಂದಿದ್ದಾರೆ. ಹೀಗೆ ಮಾಡುತ್ತಾ ಇನ್ನೊಂದು ಧರ್ಮವನ್ನು ಅನುಸರಿಸಬೇಕು.

**8) ಸಖ್ಯವು :–** ಇದನ್ನೇ ಸ್ನೇಹ ಎಂದು ಹೇಳುತ್ತಾರೆ. ಎಲ್ಲರೂ ಎಲ್ಲಾ ಭಗವಂತನ ರೂಪಗಳೇ ಆದ್ದರಿಂದ ಎಲ್ಲಾ ಸಮಾನ ಆದ್ದರಿಂದ ಇಲ್ಲಿ ಹೆಚ್ಚು ಕಡಿಮೆ ಎಂದಿಲ್ಲ ಆದ್ದರಿಂದ ಎಲ್ಲರಿಂದ ಸ್ನೇಹ ಮಾಡಬೇಕು. ಸೃಷ್ಟಿಯಲ್ಲಿ ಮಾನವರು ಅನುಸರಿಸಬೇಕಾದ ಒಂದು ಶ್ರೇಷ್ಠ ಧರ್ಮ "ಸ್ನೇಹಧರ್ಮ". ಹಾಗೆ ಯಾರು ಮಾನವರ ಜೊತೆ ಅಲ್ಲದೇ ಎಲ್ಲಾ ಜೀವಿಗಳ ಜೊತೆ, ಪ್ರಾಣಿಗಳ ಜೊತೆ, ಸ್ನೇಹದಿಂದ ಇರುತ್ತಾರೋ, ಸ್ನೇಹ ಮಾಡುತ್ತಾರೋ, ಅವರು ಭಗವಂತನಿಗೆ ಇನ್ನೂ ಹತ್ತಿರವಾಗುತ್ತಾರೆ. ಅಂದರೆ ಜೀವ ಹಿಂಸೆ ಮಾಡಬಾರದು. ಜೀವಿಗಳ ಜೊತೆ ಸ್ನೇಹ ಬೆಳೆಸಬೇಕು. ಯಾರಿಗೂ ಕಷ್ಟವನ್ನು ಉಂಟುಮಾಡಬಾರದು. ಎಲ್ಲರ ಜೊತೆ ಇಷ್ಟದಿಂದ ಇರಬೇಕು. ಹಾಗೆ ಎಲ್ಲರ ಜೊತೆ ಇಷ್ಟದಿಂದ ಇರುವವರು ಭಗವಂತನಿಗೆ ಕೂಡಾ ಪ್ರೀತಿಪಾತ್ರರಾಗುತ್ತಾರೆ.

**9) ಆತ್ಮನಿವೇದನೆ :–** ಇದನ್ನೇ ಧ್ಯಾನ ಎಂದು ಹೇಳುತ್ತಾರೆ. ಕೊನೆಗೆ ಯಾರು ಇವೆಲ್ಲಾ ಮಾಡುತ್ತಾ ಧ್ಯಾನ ಸಹ ಮಾಡುತ್ತಾರೋ ಅವರು ಆತ್ಮನನ್ನು ನಿವೇದಿಸಿದವರಾಗುತ್ತಾರೆ. ಅಂತಿಮವಾಗಿ ಭಗವಂತನನ್ನು ತಲುಪುತ್ತಾರೆ. ಮುಕ್ತಿಯನ್ನು ಹೊಂದುತ್ತಾರೆ. ಹಾಗೆ ಯಾರು ನವವಿಧ ಭಕ್ತಿಯ ಮೂಲಕ ಭಗವಂತನನ್ನು ಸೇರುತ್ತಾರೋ ಅವರ ಜೀವನ ಧನ್ಯವಾದ ಹಾಗೆ. ಆದ್ದರಿಂದ ಈ ಒಂಭತ್ತು ಬಗೆಯ ಭಕ್ತಿಯನ್ನು ಮಾನವನು ಆಚರಿಸಬೇಕೆಂದು ತಿಳಿದುಕೊಳ್ಳಿ. ಭಗವಂತನನ್ನು ಸೇರಲು ಒಂಭತ್ತು ಬಗೆಯ ಭಕ್ತಿ ಮಾರ್ಗಗಳಿವೆ. ಯಾವ ಮಾರ್ಗದಿಂದಾದರು ಭಗವಂತನನ್ನು ಸೇರಬಹುದೆಂದು ಅನೇಕರು ಭಾವಿಸುತ್ತಾರೆ. ಆದರೆ ಭಗವಂತನನ್ನು ಸೇರಲು ಯಾವುದೋ ಒಂದು ಮಾರ್ಗವಲ್ಲ ಈ ಒಂಭತ್ತು ಮಾರ್ಗಗಳ ಅವಶ್ಯಕತೆ ಇದೆ.

ಕಾರಣ ಭಗವಂತನನ್ನು ಕುರಿತು ಏನೂ ತಿಳಿಯದವರಿಗೆ ಮೊದಲು 4 ಮಾರ್ಗಗಳು ಭಗವಂತನನ್ನೇ ಕುರಿತು ಅಲ್ಲದೇ ಭಗವಂತನ ವಿಷಯದಲ್ಲಿ ಏನು ಮಾಡಬೇಕೋ ಹೇಗೆ ಪ್ರವರ್ತಿಸಬೇಕೋ, ತಿಳಿಯಲಾಗಿದೆ. ಕೊನೆಯದಾದ ಒಂಭತ್ತನೇಯ ಮಾರ್ಗವಾದ ಆತ್ಮನಿವೇಧನೆ ಅಂದರೆ ಧ್ಯಾನ ಮಾತ್ರವೇ ಭಗವಂತನನ್ನು ತಲುಪುತ್ತದೆ. ಈ ವಿಷಯವೇ 21ನೇ ಅಧ್ಯಾಯ, 159ನೇಯ ಪುಟದಲ್ಲಿ ಅನಂತರಾವು ಪಾಟಂಕರ್ ಶಾಂತಿ ಪ್ರಸಾದಿಸಿ ಎಂದು ಕೋರಿದಾಗ ಬಾಬಾ ಒಂದು ನೀತಿ ಕಥೆಯನ್ನು ಈ ರೀತಿ ಹೇಳಿದರು.

**"ಒಂದು ದಿನ ಒಬ್ಬ ವರ್ತಕನು ಇಲ್ಲಿಗೆ ಬಂದನು. ಆತನ ಎದುರಿಗೆ ಒಂದು ಹೆಣ್ಣು ಕುದುರೆ ಲದ್ದಿ ಹಾಕಿತ್ತು. ಅದು ಒಂಭತ್ತು ಉಂಡೆಗಳಾಗಿ ಬಿದ್ದಿತ್ತು. ಆ ಒಂಭತ್ತು ಉಂಡೆಗಳನ್ನು ಅದರಲ್ಲಿ ಇಟ್ಟುಕೊಂಡನು. ಈ ರೀತಿ ಆತನು ಮನಸ್ಸನ್ನು ಕೇಂದ್ರೀಕರಿಸಲಾಯಿತು"**. ಈ ಮಾತುಗಳು ಪಾಟಂಕರ್‌ಗೆ ಅರ್ಥವಾಗಲ್ಲಿಲ್ಲ.

ಆಗ ಅವರು ಅದರ ಅರ್ಥವೇನು ಎಂದು ದಾದಾಕೇಲ್ಕರರನ್ನು ಕೇಳಿದನು. ಆ ಮಾತುಗಳಲ್ಲಿ ಬಾಬಾ ಉದ್ದೇಶವೇನು? ಅದಕ್ಕೆ ಕೇಲ್ಕರು ಹೀಗೆ ಹೇಳಿದರು.

**"ಹೆಣ್ಣು ಕುದುರೆ ಅಂದರೆ ಇಲ್ಲಿ ಭಗವಂತನ ಅನುಗ್ರಹ ಒಂಭತ್ತು ಉಂಡೆಗಳ ಲದ್ದೆ ಎಂದರೆ ನವವಿಧ ಭಕ್ತಿಗಳು"**. ಇವುಗಳನ್ನು ಅನುಸರಿಸಿದರೆ ಭಗವಂತನು ಸಂತೃಪ್ತಿ ಹೊಂದುವನು ಎಂದು ಉತ್ತರ ನೀಡಿದನು.

ಅವರು ಇನ್ನೂ ನೀನು ಕೂಡಾ ಆ ವರ್ತಕ ಎಂದುಕೋ ಅವನ ಹಾಗೆ ನವವಿಧ ಭಕ್ತಿಯನ್ನು ಒಟ್ಟುಗೂಡಿಸಿ ಅವನ ಹಾಗೆ ಆಚರಿಸು. ಆಗ ನಿನಗೆ ಮನೋಧೈರ್ಯ, ಶಾಂತಿ ಉಂಟಾಗುವುದೆಂದು ಹೇಳಲಾಗಿದೆ.

ಆ ಮರುದಿನ ಪಾಟಂಕರ್ ಬಾಬಾರವರನ್ನು ನಮಸ್ಕರಿಸಲು ಹೋದಾಗ ಬಾಬಾ **"ಒಂಭತ್ತು ಕುದುರೆಗಳ ಉಂಡೆಗಳನ್ನು ಕೂಡಿಹಾಕುವೆಯಾ? ಇಲ್ಲವಾ?"** ಎಂದು ಪ್ರಶ್ನಿಸಿದರು. ಅಂದರೆ ಇದರ ಅರ್ಥ ಯಾರಾದರೂ ಒಂಭತ್ತು ಉಂಡೆಗಳನ್ನು ಒಟ್ಟುಗೂಡಿಸಬೇಕೆಂದು ಬಾಬಾ ಹೇಳಿದ ಹಾಗೆ ಅಲ್ಲವೇ? ಅಂದರೆ ನವವಿಧ ಭಕ್ತಿಗಳು ಅವಶ್ಯಕವೇ ಅಲ್ಲವೇ ಆಚರಿಸಬೇಕು, ಅಂದರೆ ಭಗವಂತನನ್ನು ಪಡೆಯಲು ಒಂಭತ್ತು ವಿಧವಾಗಿ ಆರಾಧಿಸಬೇಕು. ಯಾವುದೋ ಒಂದು ಆದರೆ ಸರಿಹೋಗುವುದಿಲ್ಲ ಎಂದು ಅರ್ಥ, ಆದ್ದರಿಂದ ಎಲ್ಲಾ ಆಚರಿಸುತ್ತಾ ಕೊನೆಯದಾದ ಆತ್ಮನಿವೇದನೆಯಿಂದ ಅಂದರೆ ಧ್ಯಾನದಿಂದ ಸುಲಭವಾಗಿ ಭಗವಂತನನ್ನು ತಲುಪಬಹುದು. ಆತ್ಮವನ್ನು ಸಾಕ್ಷಾತ್ಕರಿಸಿಕೊಳ್ಳಬಹುದು. ಶಾಂತಿಯನ್ನು ಹೊಂದಬಹುದು.

# ಆತ್ಮನಿವೇದನೆ

## ಆಲಯಗಳಲ್ಲಿ ತೆಂಗಿನಕಾಯಿ ನೈವೇದ್ಯವಿಡುವುದರಲ್ಲಿಅಂತರಾರ್ಥವೇನು?

ಒಂಭತ್ತು ಬಗೆಯ ಭಕ್ತರಿದ್ದಾರೆಂದು ತಿಳಿಯಪಡಿಸಿದರು. 1)ಶ್ರವಣ ಮಾಡುವವರು 2) ಮನನ ಮಾಡುವವರು 3)ಕೀರ್ತನೆ ಹಾಡುವವರು 4)ಪಾದಸೇವೆ ಮಾಡುವವರು 5)ಅರ್ಚನೆಗಳನ್ನು ಮಾಡುವವರು 6)ವಂದನೆಗಳನ್ನು ಅರ್ಪಿಸುವವರು 7)ಧ್ಯಾಸ ಮಾಡುವವರು 8)ಸಖ್ಯತೆ ಬೆಳೆಸುವವರು ಇದ್ದಾರೆ, ಆದರೆ ಇವೆಲ್ಲವುಗಳಿಗಿಂತಾ ಕೂಡಾ ಒಂಭತ್ತನೆಯವರಾದ 'ಆತ್ಮನಿವೇದನೆ' ಮಾಡುವ ಭಕ್ತರೆಂದರೆ ಶಿರಡಿ ಸಾಯಿಬಾಬಾಗೆ ತುಂಬಾ ಇಷ್ಟ. ಆತ್ಮನಿವೇದನೆ ಅವರಿಗೆ ಪ್ರೀತಿಕರವಾದದ್ದು. ಉಳಿದ ಎಲ್ಲಾ ತರಹದ ಭಕ್ತರಿಗಿಂತಾ ಅವರಿಗೆ ಅತ್ಯಂತ ಪ್ರೀತಿಕರವಾದವರು ಆತ್ಮನಿವೇಧನೆ ಮಾಡುವವರೇ ಎಂದು ಅವರು ಹೇಳಿದ್ದಾರೆ.

ಬಾಬಾರವರಿಗೆ ನಾವು ಇಷ್ಟವಾಗಬೇಕಾದರೂ ಅವರಿಗೆ ಇಷ್ಟವಾದದ್ದನ್ನು ನಿವೇಧಿಸಬೇಕಾದರೂ ಅಂದರೆ ಅವರು ಇಷ್ಟ ಪಡುವುದನ್ನು ಸಮರ್ಪಿಸಬೇಕಾದರೂ ಆತ್ಮನನ್ನೇ ನಿವೇಧಿಸಬೇಕು. ನಿಜವಾದ ಭಕ್ತನು ಯಾರು? ಅಂದರೆ **"ಕಷ್ಟವಾದರೂ ದೇವರಿಗೆ ಇಷ್ಟವಾದದ್ದು ಸಮರ್ಪಿಸಬೇಕು"** ಅಂದರೆ ಯಾವ ಭಕ್ತನಾದರೂ ಸರಿಯೇ ತನಗೆ ಕಷ್ಟವಾದರೂ ದೇವರಿಗೆ ಇಷ್ಟವಾದ ಕೆಲಸ ಮಾಡುವವನೇ ದೇವರಿಗೆ ಪ್ರೀತಿಪಾತ್ರನಾಗುತ್ತಾನೆ. ಆಗಲೇ ಅವರ ಅನುಗ್ರಹವನ್ನು ಹೊಂದಬಲ್ಲೆವು.

ನೆನಪಿರಲಿ ದೇವರ ಅನುಗ್ರಹ ಉಂಟಾಗಬೇಕಾದರೆ **"ನಮಗೆ ದೇವರು ಇಷ್ಟವಾದರೆ ಸಾಲುವುದಿಲ್ಲ, ನಾವು ದೇವರಿಗೆ ಇಷ್ಟವಾಗಬೇಕು"** ಇದು ತುಂಬಾ ಮುಖ್ಯ. ಆದ್ದರಿಂದ ನಮಗೆ ಇಷ್ಟವಾದದ್ದನ್ನು ಸಮರ್ಪಿಸುವುದಲ್ಲ ದೇವರಿಗೆ ಇಷ್ಟವಾದದ್ದನ್ನು ಸಮರ್ಪಿಸಬೇಕು.

ಶಿರಡಿ ಸಾಯಿಬಾಬಾಗೆ ಇಷ್ಟವಾದದ್ದು ಯಾವುದು ಅಂದರೆ "ಆತ್ಮನಿವೇಧನೆ" ಆತ್ಮನನ್ನು ನಿವೇಧಿಸಬೇಕೆಂದರೆ ಹೇಗೆ? ಏನು ಮಾಡಬೇಕು? ಒಬ್ಬ ಸಾಯಿಬಾಬಾಗೆ ಅಲ್ಲ, ಎಲ್ಲಾ ದೇವರುಗಳಿಗೂ ಇಷ್ಟವಾದ ಆತ್ಮನಿವೇದನೆ ಮಾರ್ಗವನ್ನು ಪೂರ್ವಕಾಲದ ಹಿರಿಯರು ನಮಗೆ ತೆಂಗಿನಕಾಯಿ ನಿವೇದನೆಯ ಮೂಲಕ ತೋರಿಸಿದರು. ಅಂದರೆ ದೇವಾಲಯಗಳಲ್ಲಿ ತೆಂಗಿನಕಾಯಿ ನೈವೇಧ್ಯ ಮಾಡಲು ಕಾರಣ, ಅಂತರಾರ್ಥ ಅದೇ. ಯಾವ ಗುಡಿಯಲ್ಲಿ ನೋಡಿದರೂ, ಎಲ್ಲಿ ನೋಡಿದರೂ ಎಲ್ಲದಕ್ಕಿಂತಾ ತೆಂಗಿನಕಾಗಿ ನೈವೇದ್ಯಕ್ಕೆ ಪ್ರಾಮುಖ್ಯತೆಯನ್ನು ನೀಡುತ್ತಾರೆ. ತೆಂಗಿನಕಾಯಿ ನೈವೇಧ್ಯಕ್ಕೆ ಪ್ರಾಮುಖ್ಯತೆ ಬರಲು ಅಂತರಾರ್ಥ ಇದೆ. ತೆಂಗಿನಕಾಯಿ ನೈವೇಧ್ಯ ತುಂಬಾ ಮುಖ್ಯವಾದದ್ದೆಂದು ಪೂರ್ವಿಕರು ಹೇಳಲು ಕಾರಣ ಅಂತರಾರ್ಥವಿದೆ. ತೆಂಗಿನಕಾಯಿ ನೈವೆದ್ಯಕ್ಕೆ ಅರ್ಥ "ಆತ್ಮನಿವೇದನೆ!" ಆತ್ಮನಿವೇದನೆಯನ್ನು ಸೂಚಿಸುವುದೇ ತೆಂಗಿನಕಾಯಿ ನಿವೇದನೆ. ಅದಕ್ಕೆ ತೆಂಗಿನ ಕಾಯಿಗೆ ಅಷ್ಟು ಪ್ರಾಮುಖ್ಯತೆಯನ್ನು ಕೊಡಲಾಗಿದೆ.

ಏಕೆಂದರೆ ತೆಂಗಿನಕಾಯಿಯ ಒಳಗೆ (ಆಂತರ್ಯದಲ್ಲಿ) ಇರುವ ಸ್ವಚ್ಛವಾದ ಶ್ವೇತ

(ಬೆಳ್ಳಗಿರುವ) ಕೊಬ್ಬರಿಯನ್ನು ನಿವೇಧಿಸಬೇಕಾದರೆ ಮುಂಚಿತವಾಗಿ ಮೇಲೆ ಇರುವ ಸಿಪ್ಪೆ ತೆಗೆಯಬೇಕು. ಅನಂತರ ಕೆಲಸಕ್ಕೆಬಾರದ ಪೀಚು (ನಾರು) ಬಿಡಿಸಬೇಕು. ಅನಂತರ ಬೆಳ್ಳಗೆ ಇರುವ ಕೊಬ್ಬರಿಯ ಮೇಲೆ ಗಟ್ಟಿಯಾಗಿರುವ ಚಿಪ್ಪೆಯನ್ನು ಒಡೆಯಬೇಕು. ಆಗ ಕೊಬ್ಬರಿ ಕಾಣುತ್ತದೆ. ಆಗಲೇ ಅದನ್ನು ನೈವೇಧ್ಯಕ್ಕೆ ಇಡಬಹುದು. ಆಗ ಸಿಹಿಯಾದ ಎಳನೀರು ಸಹ ಸಿಗುತ್ತದೆ.

ಹಾಗೆಯೇ ಆಂತರ್ಯದಲ್ಲಿರುವ ಸ್ವಚ್ಛವಾದ, ಪ್ರಕಾಶವಂತವಾದ, ಆತ್ಮನನ್ನು ನಿವೇಧಿಸಬೇಕಾದರೆ ಮೊದಲು ಮೇಲಿರುವ ಸಿಪ್ಪೆಯಂತಹ ಶರೀರವನ್ನು ಬಿಡಬೇಕು ಅಂದರೆ ಎರಡು ಕಣ್ಣುಗಳನ್ನು ಮುಚ್ಚಬೇಕು. ಅನಂತರ ಒಳಗೆ ಮನಸ್ಸಿನಲ್ಲಿರುವ ಕೆಲಸಕ್ಕೆ ಬಾರದ 'ಅರಿಷಡ್ವರ್ಗಗಳು' ಅಂದರೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬುವ ಗುಣಗಳನ್ನು ತೆಗೆದುಹಾಕಬೇಕು. ಅನಂತರ 'ಆತ್ಮ'ನನ್ನು ಆವರಿಸಿಕೊಂಡು ಗಟ್ಟಿಯಾಗಿ ಹಂಚಿನ ಹಾಗೆ ಇರುವ 'ನಾನು' ಎನ್ನುವ ಅಹಂಕಾರವನ್ನು ಒಡೆಯಬೇಕು. ಅಂದರೆ ತೊಲಗಿಸಬೇಕು. ಆಗಲೇ ನಮಗೆ ಕೊಬ್ಬರಿಯಂತಹ ಸ್ವಚ್ಛವಾದ, ಪ್ರಕಾಶವಂತವಾದ, ಆತ್ಮ ಸಾಕ್ಷಾತ್ಕಾರವಾಗುತ್ತದೆ.

ಅಂದರೆ ಕಾಣುತ್ತದೆ. ಆಗಲೇ ಆತ್ಮವನ್ನು ಪಿವೇಧಿಸಬಲ್ಲೆವು. ಆಗಲೇ ನಮಗೆ ಸಿಹಿಯಾದ ಎಳನೀರಿನಂತಹ ಅಂತ್ಯವಿಲ್ಲದ ಆನಂದ ಸಹ ಲಭಿಸುತ್ತದೆ. ಶಾಶ್ವತಾನಂದ ಲಭಿಸಿತ್ತದೆ ಜನ್ಮಧನ್ಯವಾಗುತ್ತದೆ. **"ತೆಂಗಿನಕಾಯಿಯನ್ನು ನಿವೇಧಿಸುವುದೆಂದರೆ ಅರ್ಥ ಆತ್ಮನನ್ನು ನಿವೇದಿಸಬೇಕೆಂದು"** ದೇವರು ಕೊಬ್ಬರಿಯನ್ನು ಇಷ್ಟಪಡುತ್ತಾನೆ ಎಂದು ಅರ್ಥ. ಆತ್ಮನನ್ನು ನಿವೇದಿಬೇಕಾದರೆ ಮಾಡಬೇಕಾಗಿರುವುದು "ಧ್ಯಾನ" 'ಧ್ಯಾನ'ದಿಂದಲೇ **"ಆತ್ಮನಿವೇದನೆ"** ಮಾಡಬಲ್ಲೆವು.

ಧ್ಯಾನದಲ್ಲಿ ಮೊದಲು ಕಣ್ಣುಗಳನ್ನು ಮುಚ್ಚಿಕೊಳ್ಳುತ್ತೇವೆ. ದೇಹ ಭಾವನೆಯನ್ನು ಬಿಡುತ್ತೇವೆ. ಅನಂತರ ಶ್ವಾಸದ ಮೇಲೆ ಧ್ಯಾಸವಿಟ್ಟು ನಿಧಾನಕ್ಕೆ ಮನಸ್ಸನ್ನು ನಿಶ್ಚಲಗೊಳಿಸುತ್ತೇವೆ. ಅರಿಷಡ್ವರ್ಗಗಳ ಪ್ರಾಮುಖ್ಯತೆ ಇಲ್ಲದಿರುವ ಹಾಗೆ ಮಾಡುತ್ತೇವೆ. ಹಾಗೆ ಆತ್ಮವನ್ನು ನಿವೇದಿಸುತ್ತೇವೆ.

ಧ್ಯಾನ ಮಾಡದೇ ಇರುವವರು ಕೊಬ್ರಿಯನ್ನು ಮಾತ್ರವೇ ನಿವೇಧಿಸಬಲ್ಲರು. ಹಾಗೆ ಕೊಬ್ಬರಿಯನ್ನು ನಿವೇದಿಸುವವರು ದೇವರ ವಿಗ್ರಹವನ್ನು ಮಾತ್ರವೇ ದರ್ಶಿಸಬಲ್ಲರು. ಆದರೆ ಆತ್ಮನನ್ನು ನಿವೇದಿಸಿದವರು ಆ ದೇವರ ಸತ್ಯರೂಪವನ್ನು ಅಂದರೆ ನಿಜವಾದ ದೇವರನ್ನು ದರ್ಶಿಸಬಲ್ಲರು .

ಅದಕ್ಕೆ ಶಿರಡಿ ಬಾಬಾ ಆತ್ಮನಿವೇದನೆ ಮಾಡಿ ಎಂದರು. ಅಂದರೆ ಧ್ಯಾನ ಮಾಡಿ ಎಂದೇ ಬಾಬಾರವರ ಸಂದೇಶ. ಅದಕ್ಕೆ ಬಾಬಾರವರ ಗುಡಿಯಲ್ಲಿ ಧ್ಯಾನ ಮಂದಿರಗಳು ನಿರ್ಮಿಸಲು ಕಾರಣ ಧ್ಯಾನ ಮಾಡಲಿಕ್ಕಾಗಿಯೇ. ಆದ್ದರಿಂದ ಗುಡಿಗಳಲ್ಲಿ ತೆಂಗಿನಕಾಯಿಗಳನ್ನು ಸಮರ್ಪಿಸಿ ವಿಗ್ರಹ ದರ್ಶನದಿಂದಲೇ ತೃಪ್ತಿ ಪಡದೇ ಅಲ್ಲೇ ಇರುವ ಧ್ಯಾನ ಮಂದಿರಗಳಲ್ಲಿ ಧ್ಯಾನ ಮಾಡಿ, ಆತ್ಮನಿವೇದನೆ ಮೂಲಕ ಬಾಬಾರವರನ್ನೇ ದರ್ಶಿಸಿ. ಬಾಬಾರವರ ಪ್ರೀತಿಪಾತ್ರರಾಗಿ ಜೀವನಗಳನ್ನು ಧನ್ಯಮಾಡಿಕೊಳ್ಳಿ. ಇದೇ ಬಾಬಾ ಸಂದೇಶ.

# ಬಾಬಾ ಮನುಷ್ಯರು ಯಾರು?

28ನೇಯ ಅಧ್ಯಾಯ, 207ನೇ ಪುಟದಲ್ಲಿ ಬಾಬಾ ಈ ರೀತಿ ಹೇಳಿದ್ದಾರೆ.

**"ನನ್ನ ಮನುಷ್ಯರು ಎಷ್ಟು ದೂರವಿದ್ದರೂ 1000 ಕಿ.ಮೀ ದೂರವಿದ್ದರೂ, ಗುಬ್ಬಚ್ಚಿಯ ಕಾಲುಗಳಿಗೆ ದಾರ ಕಟ್ಟಿ ಎಳೆದುಕೊಂಡ ಹಾಗೆ ಆತನನ್ನು ಶಿರಡಿಗೆ ಎಳೆದುಕೊಳ್ಳುತ್ತೇನೆ."**

ಇಲ್ಲಿ ಬಾಬಾ 'ನನ್ನ ಮನುಷ್ಯರು' ಎಂದಿದ್ದಾರೆಂದರೆ ಆತನ ಮನುಷ್ಯರು ಆಗದೇ ಇರುವವರು ಇದ್ದಾರೆಯೇ ಎನ್ನುವ ಸಂದೇಹ ಉಂಟಾಗಬಹುದು. ಅವರಿಗೆ ಎಲ್ಲರೂ ಒಂದೇ ಎಲ್ಲರೂ ಆತನ ಮನುಷ್ಯರೇ. ಆದರೆ ಯಾರು ಅವರಬಗ್ಗೆ ಆಸಕ್ತಿಯಿಂದ ಇರುತ್ತಾರೋ ಅವರನ್ನು ತಲುಪಬೇಕೆಂಬುವ ತಪನೆ ಹೊಂದಿದ್ದು ಬಾಬಾ ಎಲ್ಲಿರುತ್ತಾರೋ ತಿಳಿಯದೇ ಎಲ್ಲಿಗೆಹೋಗಬೇಕೋ ತಿಳಿಯದೇ ತಪನೆಗೆ ಒಳಗಾಗುತ್ತಾರೋ ಅಂತವರು ಎಂದು ಅರ್ಥ. ಲೋಕದಲ್ಲಿ ಬಾಬಾ ಭಕ್ತರು ಎರಡು ರೀತಿಯಲ್ಲಿದ್ದಾರೆ. ಒಂದು ರೀತಿ ಅವರು ಬಾಬಾರವರನ್ನು ತಲುಪಬೇಕೆಂಬ ತಪನೆಯಲ್ಲಿರುತ್ತಾರೆ. ಎರಡನೆಯ ರೀತಿಯವರು ಇಹ ಪರ ಸೌಖ್ಯಗಳೆಂದರೆ ಆಸಕ್ತಿ ತೋರಿಸುತ್ತಾ ಅವುಗಳ ಮೇಲೆ ಅತಿ ಹೆಚ್ಚು ಮಮಕಾರವನ್ನು ಬೆಳೆಸಿಕೊಂಡು ಅದಕ್ಕಾಗಿ ಪ್ರಯತ್ನಿಸುತ್ತಾ, ಅವುಗಳನ್ನು ಪಡೆಯಲು ವಿಧವಿಧವಾಗಿ ಪ್ರಯತ್ನಗಳನ್ನು ಮಾಡುತ್ತಾ ಅವುಗಳಿಗಾಗಿ ಮಾಡಬಾರದ ಕೆಲಸಗಳನ್ನು ಮಾಡುತ್ತಾ ಅವು ಹೊಂದಲಾರದೇ ಹೋಗಿದ್ದೇವೆ ಎಂದು ನನ್ನಿಂದ ಆಗುತ್ತಿಲ್ಲವೆಂದು ಅದಕ್ಕಾಗಿ ಬಾಬಾರವರನ್ನು ಆಶ್ರಯಿಸಬೇಕೆಂದು ಬರುವವರು ಇದ್ದಾರೆ. ಬಾಬಾ 'ನನ್ನ ಮನುಷ್ಯರು' ಎಂದು ಹೇಳಿದ್ದು ಮೊದಲನೇ ರೀತಿಯಲ್ಲಿರುವ ಭಕ್ತರ ಬಗ್ಗೆ ಅಂತವರು **"1000 ಕಿ.ಮೀಗಳ ದೂರವಿದ್ದರೂ ಗುಬ್ಬಚ್ಚಿ ಕಾಲಿಗೆ ದಾರವನ್ನು ಕಟ್ಟಿ ಎಳೆದ ಹಾಗೆ ಆತನನ್ನು ಶಿರಡಿಗೆ ಎಳೆದೊಯ್ಯುವೆನು"** ಅಂದರೆ ನನ್ನ ಹತ್ತಿರಕ್ಕೆ ಆತನನ್ನು ಕರೆಸಿಕೊಳ್ಳುತ್ತೇನೆ ಎಂದು ಬಾಬಾರವರು ಹೇಳಿದ್ದಾರೆ. ಅಂದರೆ ಯಾರು ಎಲ್ಲದರ ಮೇಲೂ ಮಮಕಾರವನ್ನು ಬಿಟ್ಟು ಭಗವಂತನ ಮೇಲೆ ಅತೀ ಆಸಕ್ತಿಯನ್ನು ತೋರಿಸುತ್ತಾರೋ ಅವರೇ ಭಗವಂತನನ್ನು ಆಕರ್ಷಿಸಬಲ್ಲವರಾಗುತ್ತಾರೆ. ಆತನ ದೃಷ್ಟಿಯಲ್ಲಿ ಬೀಳುತ್ತಾರೆ. ಅವರ ಅನುಗ್ರಹಕ್ಕೆ ಪಾತ್ರರಾಗುತ್ತಾರೆ. ಆತನನ್ನು ಹೊಂದುವ ಅರ್ಹತೆ ಸಂಪಾದಿಸುತ್ತಾರೆ. ಅವರನ್ನು ತಲುಪುವ ಮಾರ್ಗವನ್ನು ತಿಳಿಯಬಲ್ಲವರಾಗುತ್ತಾರೆಂದು ಬಾಬಾರವರ ಸಂದೇಶ.

ಏಕೆಂದರೆ ಎರಡನೆಯ ರೀತಿ ಇರುವವರಿಗೆ ಬಾಬಾಗಿಂತಾ, ಬಾಬಾ ಕೋರುವ ಅವರ ಬಯಕೆ ತೀರಿಸುವುದೇ ಇಷ್ಟ. ಅವರು ಬಾಬಾರವರನ್ನು ಇಷ್ಟ ಪಡುತ್ತಿದ್ದಾರೆಂದರೇ ಬಾಬಾ ಅವರಿಗೆ ಕೇಳಿದ್ದೆಲ್ಲಾ ಕೊಡುತ್ತಿದ್ದಾರೆಂದು ಇಷ್ಟಪಡುತ್ತಿದ್ದಾರೆ, ಕೊಡದಿದ್ದರೆ ಕಷ್ಟ ಕೂಡಾ ಉಂಟಾಗುತ್ತದೆ. ಕೇಳಿದ್ದು ಕೊಡದಿದ್ದರೆ ನಿಧಾನವಾಗಿ ಇಷ್ಟ ಕಡಿಮೆ ಆಗುತ್ತದೆ. ಆದ್ದರಿಂದ ಬಯಕೆಗಳಿಗಾಗಿ ಬಾಬಾರವರನ್ನು ಆಶ್ರಯಿಸುವರು. ಬಾಬಾ ಕೊಡುವ ಪದಾರ್ಥಗಳನ್ನು ಇಷ್ಟಪಡುತ್ತಿದ್ದಾರೆಂದು ಅರ್ಥ. ಆದರೆ ಬಾಬಾರವರನ್ನು ಸ್ಪಷ್ಟವಾಗಿ ತಿಳಿದುಕೊಳ್ಳಬಹುದು.

ಯೋಚಿಸಿ. ನಾವು ಭಗವಂತನನ್ನು ಇಷ್ಟ ಪಡದೇ ಇದ್ದರೆ ಭಗವಂತ ನಮ್ಮನ್ನು ಹೇಗೆ ಇಷ್ಟ ಪಡುತ್ತಾನೆ, ನಮಗೆ ಭಗವಂತನನ್ನು ಸೇರಬೇಕೆನ್ನುವ ತಪನೆ ಇಲ್ಲದಿದ್ದರೆ ಪರಮಾತ್ಮ ನಮ್ಮನ್ನು ತನ್ನ ಹತ್ತಿರ ಹೇಗೆ ಕರೆಸಿಕೊಳ್ಳತ್ತಾನೆ? ನಮಗೆ ಇಷ್ಟವಿಲ್ಲದ ಕೆಲಸ ಪರಮಾತ್ಮ ಮಾಡುತ್ತಾನೆಯೇ? ಆದ್ದರಿಂದ ಯಾರು "ಬಾಬಾ ಮನುಷ್ಯರು" ಅಂದರೆ ಬಾಬಾರವರನ್ನು ಇಷ್ಟಪಡುವವರು ಬಾಬಾ ಹತ್ತಿರ ಸೇರಬೇಕೆನ್ನುವ ತವಕದಲ್ಲಿರುವರು.

ಏಕೆಂದರೆ ಪ್ರತಿ ಒಬ್ಬರೂ ಬಾಬಾ ಅಂದರೆ ನನಗಿಷ್ಟ, ನನಗಿಷ್ಟ, ಎನ್ನುತ್ತಾರೆ. ಅಷ್ಟಕ್ಕಿಂತಾ ಹೆಚ್ಚಾಗಿ ಯೋಚಿಸುವುದಿಲ್ಲ. ನೆನಪಿರಲಿ **"ನಿಮಗೆ ಬಾಬಾ ಇಷ್ಟವಾದ ಮಾತ್ರಕ್ಕೆ ಸಾಲುವುದಿಲ್ಲ, ಬಾಬಾಗೆ ನೀವೆಂದರೆ ಇಷ್ಟವಾಗಬೇಕು"**. ಬಾಬಾಗೆ ನಾವು ಪ್ರೀತಿಪಾತ್ರರಾಗಬೇಕೆಂದರೆ ಏನು ಮಾಡಬೇಕು? ಬಾಬಾಗೆ ಯಾರೆಂದರೆ ಇಷ್ಟ? ಅಂದರೆ ಬಾಬಾರನ್ನು ಆರಾಧಿಸುವವರೆಲ್ಲಾ ಬಾಬಾ ಹೇಳಿದ್ದನ್ನು ಆಚರಿಸುವವರೇ ಅವರಿಗೆ ಪ್ರೀತಿ ಪಾತ್ರರಾಗುತ್ತಾರಾ? ಅವರನ್ನು ಬಾಬಾ ಹೆಚ್ಚು ಇಷ್ಟ ಪಡುತ್ತಾರಾ? ಸ್ವಲ್ಪ ಯೋಚಿಸಿ. ಅನೇಕ ಜನ ನಾವು ಬಾಬಾ ಭಕ್ತರು. ಬಾಬಾ ಭಕ್ತರು ಎಂದು ಹೇಳಿಕೊಳ್ಳುತ್ತಾರೆ. ಆದರೆ **"ನಾವು ಬಾಬಾ ಭಕ್ತರೆಂದು ಅಂದುಕೊಳ್ಳುವುದರಿಂದ ಪ್ರಯೋಜನವಿಲ್ಲ. ಅದಕ್ಕಿಂತಾ 'ಇವನು ನನ್ನ ಭಕ್ತನು' ಎಂದು ಬಾಬಾ ಅಂದುಕೊಳ್ಳಬೇಕು"**. ಅವನೇ ದೊಡ್ಡವನು, ಅವನೇ ಅದೃಷ್ಟವಂತನು. ಅವನ ಜೀವನವೇ ಧನ್ಯ. ಅಂತವರನ್ನೇ ಬಾಬಾ ಸಣ್ಣ ಮನುಷ್ಯರೆಂದು ಭಾವಿಸುತ್ತಾರೆ. ಅವರನ್ನು ತನ್ನ ಹತ್ತಿರ ಕರೆಸಿಕೊಳ್ಳುತ್ತಾರೆ. ಅವನು ಎಲ್ಲಿದ್ದರೂ ತನ್ನ ಹತ್ತಿರ ಕರೆಸಿಕೊಳ್ಳುತ್ತಾನೆ.

ಆದ್ದರಿಂದ ನಾವು ಕೂಡ ಅವರ ಇಷ್ಟದಂತೆ ನಡೆದುಕೊಳ್ಳಬೇಕು. ಆತನ ದೃಷ್ಟಿಯಲ್ಲಿ ಆತನ ಮನುಷ್ಯನಂತೆ ಗುರುತಿಸಲ್ಪಡಬೇಕು. ಅದಕ್ಕೆ ಅವರನ್ನು ಪ್ರಾರ್ಥಿಸುವುದಲ್ಲ. ಅವರು ಹೇಳಿದ್ದನ್ನು ಅನುಸರಿಸಬೇಕು. ಮತ್ತೆ ಅನುಸರಿಸಿದ್ದಾದರೂ ಏನು? (128ನೇ ಪುಟದಲ್ಲಿ ಆತ್ಮಸಾಕ್ಷಾತ್ಕಾರಕ್ಕೆ ಯೋಗ್ಯತೆಯಲ್ಲಿ 2ನೇ ನಿಯಮ) ಇಹ-ಪರ ಸೌಖ್ಯಗಳಲ್ಲಿ ಬೇಸರಿಕೆಯಾಗುವುದು ಅಥವಾ ವಿರಕ್ತಿ ಹೊಂದುವುದು ಅಂದರೆ ಇಹ ಲೋಕ ಸುಖಗಳ ಬಗ್ಗೆ ಆಸಕ್ತಿ ಬಿಡಬೇಕು ಅಂದರೆ ಯಾವ ಸೌಖ್ಯಗಳು ಬೇಕು ಎಂದು, ನೀಡಿ ಎಂದು ಬಾಬಾರವರನ್ನು ಬೇಡುತ್ತೇವೆ. ಅವುಗಳ ಬಗ್ಗೆ ಆಸಕ್ತಿ ಹೊಂದಿರಬಾರದು ಇನ್ನೂ ಬೇಕು ಎಂದು ಬೇಡಬಾರದು. ಇರುವುದರಲ್ಲಿ ಕೊಟ್ಟಿರುವುದರಲ್ಲಿ ತೃಪ್ತಿ ಹೊಂದಬೇಕು. ನಮಗೆ ಏನು ಇದೆಯೋ ಅದನ್ನೇ ಅನುಭವಿಸಬೇಕು ನನ್ನ ಹತ್ತಿರ ಇಲ್ಲದ್ದು ಇತರರ ಹತ್ತಿರ ಇದೆ ಎಂದು ದುಃಖಿಸಬಾರದು. ನನಗೆ ಇಲ್ಲಾ ಎಂದು ನೋವು ಪಡಬಾರದು ಇದನ್ನೇ ತೃಪ್ತಿ ಎನ್ನುತ್ತಾರೆ. ಹಾಗೆ ಅನುಭವಿಸುತ್ತಾ ಭಗವಂತನಲ್ಲಿ ಆಸಕ್ತಿ ಬೆಳೆಸಿಕೊಳ್ಳಬೇಕು ಅಂತವನೇ ಭಗವಂತನ ಮನುಷ್ಯನಾಗುತ್ತಾನೆ. ಇದೇ ಬಾಬಾ ಸಂದೇಶ.

ಇಲ್ಲಿ ಇನ್ನೂ ಸ್ವಲ್ಪ ಯೋಚಿಸಿ. ಬಾಬಾರವರನ್ನು ಇಷ್ಟ ಪಡಬೇಕಾದರೆ ಬಾಬಾ ಬಗ್ಗೆ ಆಸಕ್ತಿ ಬೆಳಸಿಕೊಳ್ಳಬೇಕಾದರೂ ಬಾಬಾರವರನ್ನು ಸೇರಬೇಕಾದರೂ "ಇಷ್ಟಕ್ಕೂ" ಬಾಬಾ ಯಾರು? ಅಂದರೆ ಇದಕ್ಕೂ ಮುಂಚೆ ನಾವು ಹೇಳಿಕೊಂಡಿದ್ದೇವೆ. "ಆತ್ಮವೇ ಬಾಬಾ" ಎಂದು ಆದ್ದರಿಂದ ಆತ್ಮವನ್ನು ಇಷ್ಟಪಡಿ. ಆತ್ಮದ ಬಗ್ಗೆ ಆಸಕ್ತಿಯನ್ನು ಬೆಳೆಸಿಕೊಳ್ಳಿ. ಆತ್ಮವನ್ನು ತಲುಪಲು ಪ್ರಯತ್ನಿಸಿ, ಆತ್ಮದ ಮೇಲೆ ದೃಷ್ಟಿ ಇಡಿ,

**"ಆತ್ಮ" ಅಂದರೆ "ಬಾಬಾ" ಎಲ್ಲಿದ್ದಾರೆ? 28ನೇ ಅಧ್ಯಾಯ, 208ನೇ ಪುಟದಲ್ಲಿ ಈ ವಿಷಯ ಸ್ಪಷ್ಟವಾಗಿ ಹೇಳಲಾಗಿದೆ. "ಶ್ರೀಸಾಯಿ" ಅನಂತನು, ಕ್ರಿಮಿಕೀಟಗಳಿಂದ ಹಿಡಿದು ಬ್ರಹ್ಮಾಂಡದ ಸಕಲ ಜೀವಿಗಳಲ್ಲಿ ವಾಸವಾಗಿದ್ದಾರೆ. ಅವರು ಸರ್ವಾಂತರ್ಯಾಮಿ,** (ಸರ್ವ ಜೀವಿಗಳ, ಪ್ರಾಣಿಗಳ, ಮಾನವರ, ಅಂತರದಲ್ಲಿ ಅಂದರೆ ಒಳಗೆ ಹೊರಗೆ ವ್ಯಾಪಿಸಿರುವವನು)

ಅಂದರೆ ಬಾಬಾ ನಮ್ಮಲ್ಲಿ ಆತ್ಮರೂಪದಲ್ಲಿದ್ದಾರೆ ಆದ್ದರಿಂದ ದೇಹದ ಮೇಲೆ ಅಲ್ಲದೇ ಆತ್ಮದ ಮೇಲೆ ಆಸಕ್ತಿ ಬೆಳೆಸಿಕೊಂಡರೆ ಬಾಬಾ ಮೇಲೆ ಆಸಕ್ತಿ ಬೆಳೆಸಿಕೊಂಡಹಾಗೆ ದೇಹ ಸುಖಗಳ ಮೇಲೆ ಅಲ್ಲದೇ ಆತ್ಮಸಾಕ್ಷಾತ್ಕಾರದ ಮೇಲೆ ಆಸಕ್ತಿ ಬೆಳೆಸಿಕೊಂಡರೆ ಬಾಬಾ ಮೇಲೆ ಆಸಕ್ತಿ ಬೆಳೆಸಿಕೊಂಡ ಹಾಗೆ ಅಂತವನೇ "ಬಾಬಾ ಮನುಷ್ಯನು" ಅದಕ್ಕೆ

ಬಾಬಾ ಬೋಧಿಸಿದ ಆತ್ಮಸಾಕ್ಷಾತ್ಕಾರದ ಮಾರ್ಗ 10ನೇ ವಿಷಯ ಭಗವಂತನ ಕಟಾಕ್ಷದಲ್ಲಿ ಬಾಬಾ ಈ ವಿಷಯದ ಬಗ್ಗೆ ಸ್ಪಷ್ಟವಾಗಿ ಹೇಳಿದ್ದಾರೆ.

ಮತ್ತು ದೇಹ ದೃಷ್ಟಿ ಬಿಟ್ಟು ಆತ್ಮದ ಮೇಲೆ ದೃಷ್ಟಿ ಇಡಬೇಕಾದರೆ ಏನು ಮಾಡಬೇಕು? ಆತ್ಮ ನಮ್ಮಲ್ಲಿ ಇದೆ, ಆದ್ದರಿಂದ ನಾವು ಅಂತರ್ಮುಖರಾಗಬೇಕು ಅಂದರೆ ಧ್ಯಾನ ಮಾಡಬೇಕು. ಅಂದರೆ ಯಾರು ಧ್ಯಾನ ಮಾಡುತ್ತಾರೋ ಅವರು ಬಾಬಾ ಮೇಲೆ ದೃಷ್ಟಿ ಇಟ್ಟಹಾಗೆ. ಬಾಬಾರವರನ್ನು ಇಷ್ಟಪಟ್ಟ ಹಾಗೆ ಧ್ಯಾನ ಮಾಡುವವರನ್ನು ತನ್ನ ಹತ್ತಿರಕ್ಕೆ ಕರೆಸಿಕೊಳ್ಳುತ್ತಾರೆಂದು ಬಾಬಾರವರು ಹೇಳಿದ್ದಾರೆ. ಸದ್ಗುರು ಹೇಳುವ ಚಿಕ್ಕ ಮಾತಿನಲ್ಲಿ ಎಷ್ಟು ಅರ್ಥವಿರುತ್ತದೆಯೋ ಅಂತವರು ಹೇಳುವ ಮಾತುಗಳಲ್ಲಿ ಭಾಹ್ಯಾರ್ಥವನ್ನು ತೆಗೆದುಕೊಂಡರೆ ನಾವು ನಷ್ಟದ ಪಾಲಾಗುತ್ತೇವೆ. ಆದರೆ ಅದರ ಅಂತರಾರ್ಥವನ್ನು ತೆಗೆದುಕೊಂಡರೆ ನಮ್ಮ ಜೀವನವೇ ಧನ್ಯವಾಗುತ್ತದೆ. ಅನೇಕ ಸಂದರ್ಭಗಳಲ್ಲಿ ಬಾಬಾ ಮಾತುಗಳು ಅನೇಕ ಜನರಿಗೆ ಅರ್ಥವಾಗುವುದಿಲ್ಲ. ಯೋಚಿಸಿದರೆ ಅದರ ಅರ್ಥವನ್ನು ತಿಳಿದುಕೊಳ್ಳಬಹುದು. ಅವರು ಅರ್ಥವಿಲ್ಲದೇ ಯಾವ ಮಾತನ್ನು ಮಾತನಾಡುವುದಿಲ್ಲ. ಅವರ ಹತ್ತಿರ ಅರ್ಥವಿಲ್ಲದ ಯಾವ ಮಾತು ಇರುವುದಿಲ್ಲ. ಎಲ್ಲಾ ಮಾತುಗಳು ಅರ್ಥಪೂರ್ಣವಾಗಿಯೇ ಇರುತ್ತವೆ. ಕೆಲವು ಉದಾಹರಣೆಗೆ ನೋಡೋಣ (14ನೇ ಅಧ್ಯಾಯದಲ್ಲಿ 17ನೇ ಪುಟದಲ್ಲಿ)

1) ಬಾಬಾ 15ರೂ ಗಳನ್ನು ದಕ್ಷಿಣೆ ಕೊಡಿ ಎಂದು ಪ್ರೊ॥ ಜಿ. ಜಿ. ನಾರ್ಕೆರವರನ್ನು ಕೇಳಿದಾಗ ಆತನು ನನ್ನ ಹತ್ತಿರ ಒಂದು ದಮ್ಮಡಿ ಪೈಸಾ ಸಹಾ ಇಲ್ಲವೆಂದನು. ಅದಕ್ಕೆ ಬಾಬಾ ಹೀಗೆ ಹೇಳಿದನು **"ನಿನ್ನ ಹತ್ತಿರ ಹಣವಿಲ್ಲವೆಂದು ನನಗೆ ಗೊತ್ತಿದೆ, ಆದರೆ ನೀನು ಯೋಗವಾಶಿಷ್ಠ ಓದುತ್ತಿದ್ದೆಯೋ ಇಲ್ಲವೋ ಅದರಿಂದ ನನಗೆ ತೆಗೆದು ನನಗೆ ದಕ್ಷಿಣೆ ಕೊಡು"**

ಇಲ್ಲಿ ಬಾಬಾ ಕೇಳಿರುವ 15ರೂ. ದಕ್ಷಿಣೆಗೆ ಅರ್ಥಯೋಗವಾಶಿಷ್ಟ್ಯದಲ್ಲಿ ಅವರು ಓದಿರುವುದರಲ್ಲಿ 15 ಧ್ಯಾನವಂತವಾದ ವಿಷಯಗಳು ಹೇಳಿ ಎಂದು ಅರ್ಥ.

2) ಇನ್ನೊಂದು ಬಾರಿ ತರ್‌ಖಡ ಹೆಂಡತಿಯನ್ನು 6ರೂಗಳ ದಕ್ಷಿಣೆ ಕೊಡಿ ಎಂದು ಬಾಬಾ ಕೇಳಿದರು. ಅವನ ಹತ್ತಿರ ಹಣ ಇಲ್ಲದಿರುವುದರಿಂದ ಆಕೆ ತುಂಬಾ ಸಪ್ಪೆಮುಖ ಇಟ್ಟುಕೊಂಡಳು. ಆಗ ಅಲ್ಲೆ ಇರುವ ಆಕೆಯ ಗಂಡ ಬಾಬಾ ವಾಕ್ಯಗಳಿಗೆ ಅರ್ಥ ತಿಳಿಸಿದರು. "ತನ್ನ ಆರು ಜನ ಶತ್ರುಗಳನ್ನು ಅಂದರೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳನ್ನು ತಮಗೆ ಪೂರ್ತಿಯಾಗಿ ಸಮರ್ಪಿಸಬೇಕೆಂದು "ಬಾಬಾ ಭಾವನೆ ಎಂದು ಆತನು ತನ್ನ ಹೆಂಡತಿಗೆ ವಿವರಿಸಿದನು ಅದಕ್ಕೆ ಬಾಬಾ ಪೂರ್ತಿಯಾಗಿ ಸಮ್ಮತಿಸಿದರು.

2) (119ನೇ ಪುಟ) ತನ್ನ ಹತ್ತಿರ ಬಂದ ಭಕ್ತರಿಗೆ ಬಾಬಾ ಎರಡು ರೀತಿಯ ಪರೀಕ್ಷೆಗಳನ್ನು ಇಡುತ್ತಿದ್ದರು. 1)ದಕ್ಷಿಣೆ 2)ರಾಧಾಕೃಷ್ಣೆ ಮಾಯಿ. ತನ್ನ ಭಕ್ತರು ಈ ಎರಡನ್ನು ಎಷ್ಟರವರೆಗೂ ತ್ಯಜಿಸಿದ್ದಾರೋ, ನೋಡಲು ಭಕ್ತರು ತನ್ನ ಹತ್ತಿರಕ್ಕೆ ಬಂದ ತಕ್ಷಣ ಬಾಬಾ ದಕ್ಷಿಣೆ ಕೇಳಿ ಪಡೆದುಕೊಂಡು 'ಶಾಲೆಗೆ' (ರಾಧಾಕೃಷ್ಣಮಯಿ ಗೃಹಕ್ಕೆ) ಕಳುಹಿಸುತ್ತಿದ್ದರು. ಈ ಎರಡು ಪರೀಕ್ಷೆಗಳು ಸಹಿಸಿಕೊಂಡರೇ ಅಂದರೆ ಹಣದಲ್ಲಿ, ಕಾಂತೆ (ಸ್ತ್ರೀ)ಯಲ್ಲಿ ಮೋಹವು ಹೋಗಿದೆ ಎಂದು ನಿರೂಪಿಸಿದಾಗ ಬಾಬಾ ದಯೆಯಿಂದ, ಆಶೀರ್ವಾದದಿಂದ ಅವರ ಪಾರಮಾರ್ಥಿಕ ಪ್ರಗತಿ ಶೀಘ್ರವಾಗುವುದು, ಇದರಿಂದ ತಿಳಿಯುವುದೇನೆಂದರೆ ಬಾಬಾ ಹಣಕ್ಕೆ, ಬಯಕೆಗಳಿಗೆ, ಪ್ರಾಮುಖ್ಯತೆಯನ್ನು ನೀಡುವುದಿಲ್ಲವೆಂದು ತಿಳಿದುಕೊಳ್ಳಬಹುದು. ಆದ್ದರಿಂದ ನಾವು ಸಮರ್ಪಿಸುವ ತೆಂಗಿನಕಾಯಿ, ಬಾಳೆಹಣ್ಣು, ಅಥವಾ ಹುಂಡಿಯಲ್ಲಿ ಹಾಕುವ ಕಾಣಿಕೆ ಮೇಲೆ ಅವರು ಆಸಕ್ತಿ

ತೋರಿಸುವುದಿಲ್ಲವೆಂದು ಅವುಗಳ ಅವಶ್ಯಕತೆ ಅವರಿಗೆ ಇಲ್ಲವೆಂದು ಅವೆಲ್ಲಾದಕ್ಕೂ ಅವರು ಪ್ರಾಧಾನ್ಯತೆ ನೀಡುವುದಿಲ್ಲವೆಂದು ಅರಿತುಕೊಳ್ಳಬಹುದು. ಅವರು ಸದಾ ನಮ್ಮನ್ನು, ನಮ್ಮಲ್ಲಿರುವ ಕೆಟ್ಟ ಗುಣಗಳನ್ನು ಸಮರ್ಪಿಸಿ ಎಂದು ಹೇಳುತ್ತಾರೆ. ಅಂದರೆ ಕೆಟ್ಟ ಗುಣಗಳನ್ನು ಬಿಡಿ ಎಂದು ಹೇಳುತ್ತಾರೆ. ಹಾಗೆಯೇ ಹಣವನ್ನು ಕೊಡುವುದಲ್ಲ. ಹಣದ ಮೇಲೆ ಇರುವ ವ್ಯಾಮೋಹವನ್ನು ತ್ಯಜಿಸಬೇಕು. ಬಯಕೆಗಳನ್ನು ಬೆಳೆಸಿಕೊಳ್ಳುವುದಲ್ಲ. ಬಯಕೆಗಳನ್ನು ಕಡಿಮೆಮಾಡಿಕೊಳ್ಳಬೇಕು ಅದೇ ಬಾಬಾ ನಮ್ಮಿಂದ ಬಯಸುವುದು. ಅದನ್ನು ದಕ್ಷಿಣೆ ರೂಪದಲ್ಲಿ ಬಯಸುತ್ತಾರೆ. ದಕ್ಷಿಣೆ ನಮ್ಮನ್ನು ಕೇಳುತ್ತಿದ್ದಾರೆ ಎಂದು ಅದರ ಅರ್ಥ. ಬಾಬಾ ಹಣ ಕೇಳುತ್ತಿದ್ದಾರೆ ಎಂದು ಅರ್ಥವಲ್ಲ. ಆದ್ದರಿಂದ ಹಣ, ಕಾಣಿಕೆಗಳನ್ನು ಸಮರ್ಪಿಸಿ ಸಂತೋಷ ಪಡುವವರಿಗೆ ನಿರಾಶೆ ಎದುರಾಗುತ್ತದೆ.

4) **ಬಾಬಾ ಬೂದಿ ಕೊಡುವುದರಲ್ಲಿ ಅರ್ಥವಿದೆ. ಅದರ ಅರ್ಥ** (33ನೇ ಅಧ್ಯಾಯ, 244ನೇ ಪುಟ) **"ಬೂದಿ ಬಾಬಾ ಬೋಧಿಸಲು ಉದ್ದೇಶವೇನು? ಪ್ರಪಂಚದಲ್ಲಿ ಕಾಣಿಸುವ ವಸ್ತುಗಳು ಎಲ್ಲವೂ ಬೂದಿಯಾಗಿ ಅಶಾಶ್ವವು ಪಂಚಭೂತಗಳಿಂದ ಮಾಡಲ್ಪಟ್ಟ ಶರೀರಗಳಲ್ಲಿಯೇ ಸೌಖ್ಯಗಳನ್ನು ಅನುಭವಿಸಿದ ನಂತರ ಪತನವಾಗಿ ಹೋಗಿ ಬೂದಿಯಾಗುತ್ತದೆ ಈ ಸಮಾಚಾರ ನೆನಪಿಗೆ ತರಲು ಬಾಬಾ ಭಕ್ತರಿಗೆ ಬೂದಿ ಪ್ರಸಾದ ಹಂಚುತ್ತಿದ್ದರು. "ಈ ಬೂದಿಯಿಂದಲೇ ಬ್ರಹ್ಮನು ನಿತ್ಯವೆಂದು ಈ ಜಗತ್ತು ಅಶಾಶ್ವತವೆಂದು ಪ್ರಪಂಚದಲ್ಲಿರುವ ಬಂಧುಗಳು, ಗಂಡ ಮಕ್ಕಳಾಗಲಿ, ತಂದೆ-ತಾಯಿ ಆಗಲಿ, ನಮ್ಮವರಲ್ಲ ಎಂದು ಬಾಬಾ ಬೋಧಿಸಿದರು"**

ಆದ್ದರಿಂದ ತಿಳಿದುಕೊಳ್ಳಿ ಭಕ್ತರು ಯಾವುದನ್ನು ಬಯಸುತ್ತಿದ್ದಾರೋ ಅವೆಲ್ಲ ಬೂದಿ ಸಮಾನ. ಅವುಗಳ ಮೇಲೆ ಮಮಕಾರ ಬಿಡಬೇಕೆಂದು ಬೂದಿ ನೀಡುವುದರ ಮೂಲಕ ಬಾಬಾ ಬೋಧಿಸುತ್ತಿದ್ದಾರೆ. ಇದರ ಅರ್ಥ ಮಾಡಿಕೊಂಡರೆ ಕೊಟ್ಟಿರುವುದರಲ್ಲಿ ನಾವು ತೃಪ್ತಿಪಡುತ್ತೇವೆ ಭಗವಂತನನ್ನು ತಲುಪುವ ಪ್ರಯತ್ನವನ್ನು ಮಾಡುತ್ತೇವೆ, ಅಂದರೆ ಬಾಬಾ ಹೇಳಿದ ಹಾಗೆ ಧ್ಯಾನ ಮಾಡುತ್ತೇವೆ ಹಾಗೆ ಬಾಬಾ ಹೇಳಿರುವ ರೀತಿಯಲ್ಲಿ ಯಾರು ಜೀವಿಸುತ್ತಾರೋ ಅವರ ಜೀವನ ಧನ್ಯವಾಗುತ್ತದೆ. ಶಾಶ್ವತವಾಗಿ ದುಃಖದಿಂದ ಹೊರಬರುತ್ತಾರೆಂದು ತಿಳಿದುಕೊಳ್ಳಬಹುದು. ಆದ್ದರಿಂದ ಧ್ಯಾನಕ್ಕೆ ಪ್ರಾಮುಖ್ಯತೆ ನೀಡಿ. ಧ್ಯಾನ ಮಾಡಿ.

ಬ್ರಹ್ಮರ್ಷಿ ಪತ್ರೀಜಿ ಅವರ ಆಶೀರ್ವಾದದಿಂದ ತಟವರ್ತಿ ವೀರರಾಘವರಾವ್ ಅವರು ಬರೆದಂತಹ ಶಿರಡಿ ಸಾಯಿ ಸಂದೇಶಗಳನ್ನು ತೆಲುಗು ಭಾಷೆಯಿಂದ ಕನ್ನಡಕ್ಕೆ ಅನುವಾದ ಮಾಡಲು ಸ್ವಯಂ ವೀರರಾಘವರಾವ್ ಅವರೇ ನಮ್ಮ ಮನೆಗೆ ಬಂದು ಕೇಳಿದರು. ನಾನು ಸಹ ಶಿರಡಿ ಸಾಯಿ ಭಕ್ತಳು ಆದ್ದರಿಂದ ಈ ಸದವಕಾಶ ಸಿಕ್ಕಿದ್ದಕ್ಕೆ ನನ್ನ ಆನಂದಕ್ಕೆ ಪಾರವೇ ಇಲ್ಲ ಇದು ನನ್ನ ಸೌಭಾಗ್ಯವೇ ಸರಿ.

ಈ ಪುಸ್ತಕ ಅನುವಾದಿಸುವಾಗ ನಾನು ಸಹ ಅನೇಕ ಹೊಸ ವಿಷಯಗಳನ್ನು ತಿಳಿದುಕೊಂಡಿದ್ದೇನೆ. ಗುರುವಾರ ಬಂದರೆ ಶಿರಡಿ ಸಾಯಿ ಬಾಬಾ ಗುಡಿಗೆ ಹೋಗುವುದು. ಬಾಬಾರನ್ನು ಕುರಿತು ಭಜನೆಗಳನ್ನು ಮಾಡುವುದು. ಸ್ವಲ್ಪ ದಾನ, ಧರ್ಮ ಮಾಡಿ ಪ್ರಾಪಂಚಿಕ ಸುಖವನ್ನೆಲ್ಲಾ ಬಾಚಿಕೊಳ್ಳಬೇಕೆಂಬುವವರಿಗೆ ಬಾಬಾ ನೀಡಿದ ಸಂದೇಶಗಳು ಮತ್ತು ಆ ಸಂದೇಶಗಳಲ್ಲಿರುವ ಅಂತರಾರ್ಥ ತುಂಬಾ ಉಪಯೋಗವಾಗುತ್ತದೆ. ಸಾಯಿಬಾಬಾ ಭಕ್ತರೆಲ್ಲರೂ ತಪ್ಪದೇ ಓದಬೇಕಾದ ಕೃತಿ ಇದು. ಈ ಕೃತಿಯನ್ನು ಓದಿ ತಾವು ಮಾಡುವ ತಪ್ಪುಗಳನ್ನು ತಿಳಿದುಕೊಂಡು ಅವರನ್ನವರೇ ಸರಿಪಡಿಸಿಕೊಂಡು ಹೋಗಲಿ ಎನ್ನುವುದೇ ನಮ್ಮೆಲ್ಲರ ಅಭಿಲಾಶೆ.



# ಶ್ರೀ ರಾಮಧಾಮ ಧ್ಯಾನಕೇಂದ್ರ


ನಾರಾಯಣಪ್ಪಗಾರ್ಡನ್, ವೈಟ್‌ಫೀಲ್ಡ್, ಬೆಂಗಳೂರು–560 066.
ಸಂಪರ್ಕಿಸಿ : **ಹೆಚ್. ಎನ್. ಶ್ರೀನಿವಾಸ,** 9449695503
**ವಿಜಯಲಕ್ಷ್ಮೀ ಎಸ್.ಎನ್.** 80500 82689


## ಆತ್ಮಜ್ಞಾನ ಶಿಕ್ಷಣ ಶಿಬಿರ ಕಾರ್ಯಕ್ರಮಗಳು

* ಪ್ರತಿ ಸೋಮವಾರ ಸಂಜೆ 6.30 ರಿಂದ 8.30 ರವರೆಗೆ ಧ್ಯಾನ ತರಗತಿಗಳು ನಡೆಯುತ್ತವೆ.
* ಹುಣ್ಣಿಮೆ ಹಾಗೂ ಅಮಾವಾಸ್ಯೆ ಧ್ಯಾನ
* ಪ್ರತಿ ಆರು ತಿಂಗಳಿಗೊಮ್ಮೆ ಆತ್ಮಜ್ಞಾನ ಶಿಕ್ಷಣ ಶಿಬಿರ ಉಚಿತವಾಗಿ ನಡೆಯುತ್ತದೆ ಇದರ ವಿವರಗಳನ್ನು ಧ್ಯಾನಕಸ್ತೂರಿಯಲ್ಲಿ ಹಾಗೂ ಪಿಎಂಸಿ ಕನ್ನಡ ಚಾನೆಲ್‌ನಲ್ಲಿ ಪ್ರಕಟಿಸಲಾಗುವುದು.

## ಶ್ರೀ ರಾಮ ಪಬ್ಲಿಕೇಶನ್ಸ್‌ನಲ್ಲಿ ದೊರೆಯುವ ಪುಸ್ತಕಗಳು

| | |
|---|---|
| 1. ಅಹಿಂಸೆ & ಶಾಖಾಹಾರ | ರೂ. 20 |
| 2. ನವವಿಧ ಧರ್ಮಗಳು | ರೂ. 15 |
| 3. ಸಸ್ಯಾಹಾರವೇ ಮಾನವಾಹಾರ | ರೂ. 20 |
| 4. ಧ್ಯಾನ | ರೂ. 40 |
| 5. ವಿದ್ಯಾರ್ಥಿಗಳ ವಿಕಾಸಕ್ಕೆ ಧ್ಯಾನ ವಿದ್ಯೆ | ರೂ. 40 |
| 6. ಭಾಗವತ ಸನ್ನಿವೇಶಗಳ ಅಂತರಾರ್ಥ | ರೂ. 40 |
| 7. ಷಿರಿಡಿ ಸಾಯಿ ಸಂದೇಶಗಳು | ರೂ. 40 |
| 8. ಪ್ರಾಣ ಶಕ್ತಿ | ರೂ. 100 |
| 9. ಜೀವನದ ಸೂಕ್ಷ್ಮಗಳು | ರೂ. 60 |
| 10. ವಿದ್ಯಾರ್ಥಿ ಜೀವನ ಕ್ರಾಂತಿ | |
| 11. ಸಂಘಂ ಶರಣಂ ಗಚ್ಛಾಮಿ | ರೂ.300 |

ಪುಸ್ತಕಗಳಿಗಾಗಿ ಸಂಪರ್ಕಿಸಿ

**ಶ್ರೀರಾಮ ಪಬ್ಲಿಕೇಶನ್ಸ್**

ನಾರಾಯಣಪ್ಪಗಾರ್ಡನ್, ವೈಟ್‌ಫೀಲ್ಡ್, ಬೆಂಗಳೂರು–560 066.

## "ಧ್ಯಾನ ಮಾಡುವ ವಿಧಾನ"

ಯಾವುದಾದರೂ ಸುಖಾಸನದಲ್ಲಿ .. ಹಾಯಾಗಿ ಕುಳಿತುಕೊಂಡು ..
ಕೈಗಳೆರಡೂ ಸೇರಿಸಿಕೊಂಡು .. ಕಣ್ಣೆರೆಡೂ ಮುಚ್ಚಿಕೊಂಡು ..
ಪ್ರಕೃತಿ ಸಹಜವಾಗಿ ನಡೆಯುತ್ತಲಿರುವ ಉಚ್ಛ್ವಾಸ, ನಿಶ್ವಾಸಗಳನ್ನೇ ..
ಏಕಧಾರೆಯಾಗಿ .. ಗಮನಿಸುತ್ತಾ ಇರಬೇಕು!

**ಧ್ಯಾನವನ್ನು ಯಾರಾದರೂ ಮಾಡಬಹುದು**
**ಯಾವ ವಯಸ್ಸಿನವರಾದರೂ ಮಾಡಬಹುದು**
**ಯಾವ ಸಮಯದಲ್ಲಿಯಾದರೂ ಮಾಡಬಹುದು**
**ಯಾವ ಸ್ಥಳದಲ್ಲಿಯಾದರೂ ಮಾಡಬಹುದು.**

**ಧ್ಯಾನವನ್ನು ನಿಯಮಿತವಾಗಿ ತಪ್ಪದೇ ಮಾಡಬೇಕು....**

ಅವರವರ ವಯಸ್ಸಿಗೆ ಅನುಗುಣವಾಗಿ ಪ್ರತಿಯೊಬ್ಬರೂ, ಪ್ರತಿನಿತ್ಯವೂ ಧ್ಯಾನ ಮಾಡಬೇಕು
ಉದಾಹರಣೆಗೆ, ನಿಮ್ಮ ವಯಸ್ಸು ಇಪ್ಪತ್ತು ವರ್ಷಗಳಾಗಿದ್ದರೆ, ಇಪ್ಪತ್ತು ನಿಮಿಷಗಳ ಕಾಲ ಧ್ಯಾನ ಮಾಡಬೇಕು.
ನಿಮ್ಮ ವಯಸ್ಸು ನಲವತ್ತು ವರ್ಷಗಳಾಗಿದ್ದರೆ ನಲವತ್ತು ನಿಮಿಷಗಳ ಕಾಲ
ಹೀಗೆ ವಯಸ್ಸಿಗೆ ಅನುಗುಣವಾಗಿ ಧ್ಯಾನ ಮಾಡಬೇಕು.



**ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್ (ರಿ)**
# 1534/1, ಒಂದನೇ ಮಹಡಿ 26ನೇ ಮುಖ್ಯರಸ್ತೆ, ರಾಗಿಗುಡ್ಡ ಆಂಜನೇಯ ದೇವಸ್ಥಾನದ ಹತ್ತಿರ
9ನೇ ಬ್ಲಾಕ್, ಜಯನಗರ, ಬೆಂಗಳೂರು – 560 069
**ವಾಟ್ಸಾಪ್ ಅಥವಾ ಕರೆಮಾಡಿ : 7618731963; 9901598073**



ತಾವು ದೇವರ ಭಕ್ತರೆಂದುಕೊಳ್ಳುವವರು ದೇವರನ್ನು ಆರಾಧಿಸುವದರ ಬದಲು ದೇವರು ಹೇಳಿದ್ದನ್ನು ಆಚರಣೆಯಲ್ಲಿಡಬೇಕು. ದೇವರನ್ನು ಪ್ರಾರ್ಥಿಸುವುದಲ್ಲ. ದೇವರು ಹೇಳಿದ್ದನ್ನು ಅನುಸರಿಸಬೇಕು.

ದೇವರನ್ನು ಇಷ್ಟಪಡುವವರು ದೇವರಿಗೆ ಪ್ರಾಮುಖ್ಯತೆಯನ್ನು ಕೊಡುವ ಬದಲು ದೇವರು ಹೇಳಿರುವುದಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಬೇಕು. ತನಗೆ ದೇವರು ಇಷ್ಟವಾದ ಮಾತ್ರಕ್ಕೆ ಪ್ರಯೋಜನವಿಲ್ಲ. ತಾನು ದೇವರಿಗೆ ಇಷ್ಟವಾಗಬೇಕೆಂದು ತಿಳಿಯಬೇಕು. ಹಾಗೆ ದೇವರಿಗೆ ಅವರು ಇಷ್ಟವಾದಾಗಲೇ ಅವರ ಜೀವನ ಧನ್ಯವಾಗುತ್ತದೆ.

ದೇವರಿಗೆ ಇಷ್ಟವಾಗಬೇಕೆಂದರೆ ದೇವರು ಹೇಳಿದ ಸಂದೇಶಗಳ ಅಂತರಾರ್ಥವನ್ನು ನೀವು ತಿಳಿಯಬೇಕು. ತಿಳಿದು ಅದನ್ನು ಆಚರಣೆಯಲ್ಲಿಡಬೇಕು. ಇದು ತುಂಬಾ ಮುಖ್ಯವಾದದ್ದು.

ಶಿರಡಿ ಸಾಯಿಬಾಬಾ ಹೇಳಿದ ಸಂದೇಶಗಳ ಅರ್ಥವನ್ನು, ಅಂತರಾರ್ಥವನ್ನು, ತಿಳಿದು, ಬಾಬಾ ಹೇಳಿದ ಮಾರ್ಗದಲ್ಲಿ ಪಯಣಿಸುವುದಕ್ಕಾಗಿಯೇ ಈ "ಶಿರಡಿ ಸಾಯಿ ಸಂದೇಶಗಳು" ಕೃತಿಯನ್ನು ರಚಿಸಲಾಗಿದೆ. ಓದುಗರು ಓದಿ ಅರ್ಥಮಾಡಿಕೊಂಡು ಆಚರಣೆಯಲ್ಲಿಟ್ಟು ನಿಮ್ಮ ಜೀವನವನ್ನು ಧನ್ಯ ಮಾಡಿಕೊಳ್ಳುತ್ತೀರಿ ಎಂದು ಆಶಿಸುತ್ತಾ............

ನಿಮ್ಮ ಆತ್ಮಬಂಧು
ತಟವರ್ತಿ ವೀರರಾಘವರಾವ್


**ಪಿರಮಿಡ್ ಸ್ಪಿರಿಚ್ಯುಯಲ್ ಸೊಸೈಟೀಸ್ ಮೂವ್‌ಮೆಂಟ್, ಇಂಡಿಯಾ**

ಧ್ಯಾನದ ಬಗ್ಗೆ ಮತ್ತಷ್ಟು ಸಮಾಚಾರಕ್ಕಾಗಿ ಈ ಕೆಳಗಿನ ವೆಬ್‌ಸೈಟ್ ಸಂದರ್ಶಿಸಿ

https: //www.youtube.com/pmckannada ● www.meditationeverywhere.org ● www.pssmovement.org

**ಶ್ರೀರಾಮ ಪಬ್ಲಿಕೇಶನ್ಸ್**

ಶ್ರೀರಾಮಧಾಮ ಧ್ಯಾನಕೇಂದ್ರ, ನಾರಾಯಣಪ್ಪ ಗಾರ್ಡನ್,
ವೈಟ್ ಫೀಲ್ಡ್, ಬೆಂಗಳೂರು - 560 066
ಸಂಪರ್ಕಿಸಿ : ಹೆಚ್.ಎನ್. ಶ್ರೀನಿವಾಸ, 9449695503
ವಿಜಯಲಕ್ಷ್ಮಿ ಎಸ್.ಎನ್. + 91 80500 82689